KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಆಗಸ್ಟ್ ೨೬, ೨೦೧೦ (ಭಾದ್ರಪದ ೪, ಶಕ ವರ್ಷ ೧೯೩೨) | ಸಂಚಿಕೆ ೩೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ಶ್ರೀ ಎಂ. ಪಿ. ಪತ್ತಾರ್, ರೇಷ್ಮೆ ಪ್ರವರ್ತಕರು, ಇವರ ಪರೀಕ್ಷಾ ಪೂರ್ವಾವಧಿಯನ್ನು ವಿಸ್ತರಿಸಿ ಘೋಷಣೆ ಮಾಡುವ ಬಗ್ಗೆ.

**ಓದಲಾಗಿದೆ** :
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ : ಸಿ–1(5)ರೇಪ್ರವ/ಪಪೂಅ/80/04–05, ದಿನಾಂಕ 31–3–2005, 4–7–2006, 30–8–2006, 4–1–2007, 3–7–2007, 22–8–2008, 1–7–2009, 16–4–2010.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಅಧಿಕೃತ ಜ್ಞಾಪನ ಸಂಖ್ಯೆ : ಸಿ–1(5)/ರೇಪ್ರವ/ಪಪೂಅ/80/04–05, ದಿನಾಂಕ 31–3–2005.
3. ಸರ್ಕಾರಿ ಆದೇಶ ಸಂಖ್ಯೆ : ವಾಕೈ 104 ರೇಇವಿ 2005, ದಿನಾಂಕ 27–5–2010

**ಪ್ರಸ್ತಾವನೆ :**

ಶ್ರೀ ಎಂ. ಪಿ. ಪತ್ತಾರ್, ರೇಷ್ಮೆ ಪ್ರವರ್ತಕರು, ಚಾಕಿ ಸಾಕಾಣಿಕೆ ಕೇಂದ್ರ, ಹುಲಕುಂದ ಇವರು ದಿನಾಂಕ 2–3–85 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಪರಿವೀಕ್ಷಣಾ ಅವಧಿಯಲ್ಲಿ ಈ ಕೆಳಗಿನ ಅವಧಿಗೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ.

1. ದಿನಾಂಕ 19–06–1985 ರಿಂದ 30–06–1985
2. ದಿನಾಂಕ 01–12–1985 ರಿಂದ 02–12–1985
3. ದಿನಾಂಕ 07–02–1986
4. ದಿನಾಂಕ 09–11–1986 ರಿಂದ 30–11–1986
5. ದಿನಾಂಕ 01–12–1986 ರಿಂದ 09–12–1986
6. ದಿನಾಂಕ 23–12–1986 ರಿಂದ 30–12–1986
7. ದಿನಾಂಕ 11–05–1987 ರಿಂದ 31–05–1987
8. ದಿನಾಂಕ 01–06–1987 ರಿಂದ 30–06–1987
9. ದಿನಾಂಕ 10–07–1987 ರಿಂದ 31–07–1987
10. ದಿನಾಂಕ 01–09–1987 ರಿಂದ 30–09–1987
11. ದಿನಾಂಕ 01–01–1987 ರಿಂದ 18–10–1987
12. ದಿನಾಂಕ 20–02–1988 ರಿಂದ 03–01–1994
13. ದಿನಾಂಕ 18–06–1994 ರಿಂದ 25–09–1994
14. ದಿನಾಂಕ 09–05–1995 ರಿಂದ 30–05–1995
15. ದಿನಾಂಕ 02–07–1995 ರಿಂದ 10–02–1997

ಇವರು ನಿಗದಿತ ಅವಧಿಯಲ್ಲಿ ಇಲಾಖಾ ಪರೀಕ್ಷೆಯನ್ನು ಪಾಸುಮಾಡಿಕೊಂಡು ಕರ್ತವ್ಯ ನಿರ್ವಹಿಸಿದ್ದಲ್ಲಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 1-3-1987ಕ್ಕೆ ಘೋಷಣೆ ಮಾಡಬೇಕಾಗಿತ್ತು. ಆದರೆ, ಈ ಅವಧಿಯಲ್ಲಿ ಅವರು ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುವುದಿಲ್ಲ ಹಾಗೂ ಈ ನೌಕರರು ಪರಿವೀಕ್ಷಣಾ ಅವಧಿಯಲ್ಲಿರುವಾಗಲೇ ಮೇಲೆ ಹೇಳಿರುವ ಅವಧಿಗೆ ಗೈರು ಹಾಜರಾಗಿದ್ದು, ಇಲಾಖಾ ಪರೀಕ್ಷೆಯನ್ನು ಗೈರು ಹಾಜರಿಯ ಅವಧಿಯಲ್ಲಿಯೇ ಅಂದರೆ, ದಿನಾಂಕ 19-5-1988 ರಂದು ಪಾಸು ಮಾಡಿಕೊಂಡಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅಧಿಕೃತ ಜ್ಞಾಪನದಲ್ಲಿ ರೇಷ್ಮೆಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(2) ರನ್ವಯ ದಿನಾಂಕ 2-3-1987 ರಿಂದ 1-3-1988 ರವರೆಗೆ ವಿಸ್ತರಿಸಿ ಆದೇಶಿಸಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ನೌಕರರ ಅನಧಿಕೃತ ಗೈರು ಹಾಜರಿಯನ್ನು ಕರ್ತವ್ಯವಲ್ಲದ ಅವಧಿ (DIES NON) ಯೆಂದು ಪರಿಗಣಿಸಿ, ಅದೇಶಿಸಿದೆ. ನೌಕರರು ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡಿರುವುದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 104 ರೇಇವಿ 2005, ಬೆಂಗಳೂರು, ದಿನಾಂಕ: 28ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಂ. ಪಿ. ಪತ್ತಾರ್, ರೇಷ್ಮೆ ಪ್ರವರ್ತಕರು ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 1-3-88 ರಿಂದ 10-2-1997 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977 ರ ನಿಯಮ 4(1)(i) ರನ್ವಯ ವಿಸ್ತರಿಸಿದೆ.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ನೌಕರರಿಗೆ ಕಾಲ್ಪನಿಕವಾಗಿ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವಿಸ್ತರಿಸಿದ ಅವಧಿಗೆ ಯಾವುದೇ ವೇತನ ಬಾಕಿಯನ್ನು ನೀಡುವಂತಿಲ್ಲವೆಂದು ಆದೇಶಿಸಿದೆ. ಈ ವಿಷಯದಲ್ಲಿ ಮೇಲ್ಕಂಡ ನಿಯಮಗಳ ನಿಯಮ 10 ರಂತೆ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಭಾರತಿ ಆರ್. ನಾಯಕ್)**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1408

## ಆರ್ಥಿಕ ಸಚಿವಾಲಯ

**ವಿಷಯ** : ಶ್ರೀ ಎಸ್. ದಿನೇಶ್ ಕುಮಾರ್, ಸರ್ಕಾರಿ ಸೇವೆಯಿಂದ ವಜಾಗೊಂಡಿರುವ ವಾಣಿಜ್ಯ ತೆರಿಗೆ ಪರಿವೀಕ್ಷಕರು ಇವರನ್ನು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ನಿರ್ದೇಶನದ ಮೇರೆಗೆ ಸೇವೆಯಲ್ಲಿ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರಿ ಆದೇಶ ಸಂಖ್ಯೆ : ಆಇ 160 ವಾತೆಸಿ 99 ದಿನಾಂಕ 01-04-2000
2) ಸರ್ಕಾರಿ ಆದೇಶ ಸಂಖ್ಯೆ : ಆಇ 160 ವಾತೆಸಿ 99, ದಿನಾಂಕ 02-12-2004
3) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ : 358/2005, ಆದೇಶ ದಿನಾಂಕ 16-12-2009.
4) ಸರ್ಕಾರಿ ವಕೀಲರ ಪತ್ರ ದಿನಾಂಕ 06-03-2010
5) ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ : ವಿಸಿಆರ್/ಎನ್‌ಜಿಜಡ್/ಸಿಆರ್-9/1993-1994, ದಿನಾಂಕ 14-05-2010.

**ಪ್ರಸ್ತಾವನೆ :**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ : (1)ರ ಆದೇಶದಲ್ಲಿ ಎಸ್. ದಿನೇಶ್ ಕುಮಾರ್, ಪ್ರಸ್ತುತ ವಜಾಗೊಂಡಿರುವ ವಾಣಿಜ್ಯ ತೆರಿಗೆ ಪರಿವೀಕ್ಷಕರು, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರಂತೆ ದಿನಾಂಕ 01-04-2000 ರಂದು ಇಲಾಖಾ ವಿಚಾರಣೆಯನ್ನು ನಡೆಸಲು ಉಪ ಲೋಕಾಯುಕ್ತರಿಗೆ ವಹಿಸಲಾಗಿತ್ತು. ನಂತರ ಲೋಕಾಯುಕ್ತರ ಶಿಫಾರಸ್ಸಿನಂತೆ ಮೇಲೆ ಓದಲಾಗಿರುವ (2)ರ ಆದೇಶದನ್ವಯ ಶ್ರೀ ಎಸ್. ದಿನೇಶ್ ಕುಮಾರ್ ರವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿತ್ತು. ಈ ಆದೇಶದ ವಿರುದ್ಧ ಶ್ರೀ ದಿನೇಶ್ ಕುಮಾರ್ ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದು, ಕರ್ನಾಟಕ ಆಡಳಿತ

ನ್ಯಾಯ ಮಂಡಳಿಯು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಉಪ ಲೋಕಾಯುಕ್ತರಿಗೆ ವಹಿಸಿದ್ದು, ಲೋಕಾಯುಕ್ತರವರು ಶಿಫಾರಸ್ಸು ನೀಡಿರುವುದು ಕಾನೂನಿಗೆ ವಿರುದ್ಧವಾಗಿದೆ ಎಂದು ತಿಳಿಸಿ, ಇವರ ವಜಾ ಆದೇಶವನ್ನು ತಳ್ಳಿಹಾಕಿ ವಿಚಾರಣೆಯ ದಾಖಲೆಗಳನ್ನು ಮಾನ್ಯ ಉಪ ಲೋಕಾಯುಕ್ತರಿಗೆ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡುವಂತೆ ಆದೇಶಿಸಿರುತ್ತದೆ. ಅದರಂತೆ ಈ ಪ್ರಕರಣದ ವಿಚಾರಣಾ ದಾಖಲೆಗಳನ್ನು ಉಪ ಲೋಕಾಯುಕ್ತರಿಗೆ ಮುಂದಿನ ಕ್ರಮ ತೆಗೆದುಕೊಳ್ಳಲು ಕಳುಹಿಸಲಾಗಿದೆ.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (4)ರ ಸರ್ಕಾರಿ ವಕೀಲರ ಪತ್ರದಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ 16–12–2009 ರಂದು ನೀಡಿರುವ ಆದೇಶದ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ತಿಳಿಸಿರುತ್ತಾರೆ.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ತೀರ್ಪಿನ ಪ್ರಕಾರ ಶ್ರೀ ಎಸ್. ದಿನೇಶ್ ಕುಮಾರ್‌ರವರನ್ನು ಕರ್ತವ್ಯಕ್ಕೆ ತೆಗೆದುಕೊಳ್ಳಬಹುದೆಂದು ಅಭಿಪ್ರಾಯಪಟ್ಟಿರುತ್ತಾರೆ.

ಶ್ರೀ ಎಸ್. ದಿನೇಶ್ ಕುಮಾರ್‌ರವರನ್ನು ವಜಾಗೊಳಿಸಿರುವ ಸರ್ಕಾರಿ ಆದೇಶ ದಿನಾಂಕ 02–12–2004ನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅನೂರ್ಜಿತಗೊಳಿಸಿರುವುದರಿಂದ ಇವರನ್ನು ಸೇವೆಗೆ ಪುನರ್ ಸ್ಥಾಪಿಸಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಇ 71 ವಾತೆತ 2008, ಬೆಂಗಳೂರು, ದಿನಾಂಕ: 01ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ 358/2005ರ ಮೇಲೆ ದಿನಾಂಕ 16–12–2009 ರಲ್ಲಿ ನೀಡಿದ ತೀರ್ಪಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಆಇ 160 ವಾತೆಸಿ 99, ದಿನಾಂಕ 02–12–2004ನ್ನು ಅನೂರ್ಜಿತಗೊಳಿಸಿರುವುದರಿಂದ ಶ್ರೀ ಎಸ್. ದಿನೇಶ್ ಕುಮಾರ್, ಪ್ರಸ್ತುತ ಸೇವೆಯಿಂದ ವಜಾಗೊಂಡಿರುವ ವಾಣಿಜ್ಯ ತೆರಿಗೆ ಪರಿವೀಕ್ಷಕರು, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ವಾಣಿಜ್ಯ ತೆರಿಗೆ ಪರಿವೀಕ್ಷಕರ ಹುದ್ದೆಯಲ್ಲಿ ಪುನರ್ ಸ್ಥಾಪಿಸಲಾಗಿದೆ, ವಾಣಿಜ್ಯ ತೆರಿಗೆ ಆಯುಕ್ತರು, ಇವರಿಗೆ ಸೂಕ್ತ ಸ್ಥಳ ನಿಯುಕ್ತಿಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಆರ್. ಚಂದ್ರಶೇಖರಾರಾಧ್ಯ)**
ಪೀಠಾಧಿಕಾರಿ
ಪಿ.ಆರ್. 1409 ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ** : ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ–2010–11ನೇ ಸಾಲಿಗೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರ ಪತ್ರ ಸಂಖ್ಯೆ : ಕಸಸಂ/ಎಂಪಿಆಯ್‌ಸಿ/2010–11, ದಿನಾಂಕ 31–03–2010.

2) ಆಯುಕ್ತರು ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ : ಡಿಎಸ್‌ಕೆ/ಇಎಸ್‌ಟಿ/2009–10, ದಿನಾಂಕ 27–04–2010.

3) ಸರ್ಕಾರದ ಆದೇಶ ಸಂಖ್ಯೆ : ವಾಕೈ 52 ಅಂಆಸ(1) 2010, ದಿನಾಂಕ 01–04–2010

**ಪ್ರಸ್ತಾವನೆ :**

ಮೇಲೆ ಓದಲಾಗಿರುವ (1)ರಲ್ಲಿರುವ ದಿನಾಂಕ 31–03–2010ರ ಪತ್ರದಲ್ಲಿ ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂರವರು ಸಕ್ಕರೆ ಸಂಸ್ಥೆಯ ಕಾರ್ಯಚಟುವಟಿಕೆಗಳಾದ ಆಡಳಿತ ಕಛೇರಿ ನಿರ್ಮಾಣ, ಕಬ್ಬು ಬೆಳೆಯ ಮೇಲ್ವಿಚಾರಣೆ, ಸಿಬ್ಬಂದಿ ವೇತನ, ತರಬೇತಿ, ಕಾರ್ಯಾಗಾರ, ಝುಡ್‌ಶಹಾಪುರ, ಯರಗಟ್ಟಿ ಮತ್ತು ಸಾತನೂರಿನಲ್ಲಿರುವ ಫಾರಂಗಳಲ್ಲಿ ಕಬ್ಬು ಬೆಳೆ ನಿರ್ವಹಣೆ ಮುಂತಾದ ಕಾರ್ಯಕ್ರಮ ಕೈಗೊಳ್ಳಲು ಹಣದ ಅವಶ್ಯಕತೆ ಇದ್ದು, 2010–11ನೇ ಸಾಲಿನಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಗೆ ಅನುದಾನದಲ್ಲಿ 200.00 ಲಕ್ಷ ರೂ.ಗಳನ್ನು ಒದಗಿಸಲಾಗಿದ್ದು, ಸದರಿ ಹಣವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಮೇಲೆ ಓದಲಾದ (2)ರಲ್ಲಿರುವ ದಿನಾಂಕ 27–04–2010ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ರವರು 2010–11ನೇ ಸಾಲಿನ ಅನುದಾನದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂರವರಿಗೆ ಸಂಸ್ಥೆಗೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಒದಗಿಸಲಾಗಿರುವ 200.00 ಲಕ್ಷ ರೂ.ಗಳಲ್ಲಿ ಸಂಸ್ಥೆಯು ಒದಗಿಸಿರುವ ಮಾಸಿಕ ಕಾರ್ಯಕ್ರಮಗಳ ವೇಳಾಪಟ್ಟಿಯ ಪ್ರಕಾರ ಮೊದಲನೆಯ ತ್ರೈಮಾಸಿಕಕ್ಕೆ 64.31 ಲಕ್ಷ ರೂ.ಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲು ಕೋರಿದ್ದಾರೆ.

ಮೇಲೆ ಓದಲಾದ (3)ರಲ್ಲಿರುವ ಆದೇಶದಲ್ಲಿ ಸರ್ಕಾರದ ಅದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16–05–2008ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದಡಿಯಲ್ಲಿ ರೆವಿನ್ಯೂ ಲೆಕ್ಕದಲ್ಲಿ ಪ್ರತಿ ಪ್ರಕರಣದಲ್ಲಿ ಹಂಚಿಕೆಯಾದ ಆಯವ್ಯಯದಲ್ಲಿ ಶೇ 25ರಷ್ಟು ಬಿಡುಗಡೆಗೆ ಮಾತ್ರ ಅವಕಾಶ ಇರುವುದರಿಂದ ಸಕ್ಕರೆ ಸಂಸ್ಥೆಯ ಕಾರ್ಯಕ್ರಮಗಳಿಗೆ ಅನುದಾನದಲ್ಲಿ ಒದಗಿಸಲಾಗಿರುವ 200.00 ಲಕ್ಷ ರೂ.ಗಳಲ್ಲಿ ಶೇ. 25ರಷ್ಟು ಅಂದರೆ 50.00 ಲಕ್ಷ ರೂ.ಗಳನ್ನು ಮಾತ್ರ ಬಿಡುಗಡೆ ಮಾಡಬಹುದಾಗಿದ್ದು, ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 85 ಎಸ್‌ಜಿಎಫ್ 2010, ಬೆಂಗಳೂರು, ದಿನಾಂಕ: 01ನೇ ಜೂನ್, 2010**

ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ರವರು ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿರವರು ಮೇಲೆ ಓದಲಾದ (1) ಮತ್ತು (2) ರಲ್ಲಿರುವ ಪ್ರಸ್ತಾವನೆಗಳಲ್ಲಿ ಕೋರಿರುವಂತೆ ಕರ್ನಾಟಕ ಸಕ್ಕರೆ ಸಂಸ್ಥೆಯ ಕಾರ್ಯಚಟುವಟಿಕೆಗಳಾದ ಆಡಳಿತ ಕಛೇರಿ ನಿರ್ಮಾಣ, ಕಬ್ಬು ಬೆಳೆಯ ಮೇಲ್ವಿಚಾರಣೆ, ಸಿಬ್ಬಂದಿ ವೇತನ, ತರಬೇತಿ, ಕಾರ್ಯಾಗಾರ, ಝುಡ್‌ಶಹಾಪುರ, ಯರಗಟ್ಟಿ ಮತ್ತು ಸಾತನೂರಿನಲ್ಲಿರುವ ಫಾರಂಗಳಲ್ಲಿ ಕಬ್ಬು ಬೆಳೆ ನಿರ್ವಹಣೆ ಮುಂತಾದ ಕಾರ್ಯಕ್ರಮ ಕೈಗೊಳ್ಳಲು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂಗೆ 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "2852–08–201–0–04–OE–059" ರಡಿ ಒದಗಿಸಲಾಗಿರುವ ರೂ. 200.00 ಲಕ್ಷಗಳಲ್ಲಿ, ಮೊದಲನೇ ತ್ರೈಮಾಸಿಕಕ್ಕೆ ರೂ. 50.00 ಲಕ್ಷಗಳನ್ನು (ಐವತ್ತು ಲಕ್ಷ ರೂ.ಗಳು ಮಾತ್ರ) ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಇವರ ಮೇಲು ರುಜು ಪಡೆದು ಸದರಿ ಹಣವನ್ನು ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಆನಂದ್ ಕುಮಾರ್)**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1410

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಶ್ರೀ ಎಂ. ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ರವರ ವಿರುದ್ಧ ಇಲಾಖಾ ವಿಚಾರಣೆ–ಆರೋಪ ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 48 ಎಸ್‌ಎಎಂ 2000, ದಿನಾಂಕ 9–4–2001
2) ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 182 ಕೆಎಂಯು 2007, ದಿನಾಂಕ 28–04–2008.
3) ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರ ಸಂಖ್ಯೆ: Lok/ARE-3/ENQ-05/2008-09 ದಿನಾಂಕ 25–11–2009
4) ಲೋಕಾಯುಕ್ತ ಕರ್ನಾಟಕ ರವರ ಪತ್ರ ಸಂಖ್ಯೆ Lok/ARE-3/ENQ-05/2008-09 ದಿನಾಂಕ 05–12–2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 09–04–2001ರ ಸರ್ಕಾರಿ ಆದೇಶದಲ್ಲಿ ಮೈಸೂರಿನಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯು ರಾಜ್ಯದಲ್ಲಿನ ದೇವಾಲಯಗಳ ಸಂರಕ್ಷಣಾ ಕಾರ್ಯದ ಹೆಸರಿನಲ್ಲಿ ಯಾವುದೇ ಸಂರಕ್ಷಣಾ ಕಾಮಗಾರಿಗಳನ್ನು ಮಾಡದೆ ಕೇವಲ ಬೋಗಸ್ ಬಿಲ್ಲುಗಳನ್ನು ಮಾಡಿ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದ ಹಾಗೂ ಈ ಅಕ್ರಮಗಳಿಗೆ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಎಂ. ವಿ. ಕೃಷ್ಣಪ್ಪ ಮತ್ತು ಇಲಾಖೆಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆದ ಶ್ರೀ ಎಸ್. ಎಂ. ಪೂಜಾರ್ ಅವರುಗಳೇ ಕಾರಣ ಎಂಬುದಾಗಿ ಸಾಕಷ್ಟು ದೂರುಗಳು ಬಂದಿದ್ದರಿಂದ ಸದರಿ ದೂರಿನ ಸತ್ಯಾಸತ್ಯತೆಯನ್ನು ತಿಳಿಯಲು ತನಿಖೆ ನಡೆಸುವ ಸಲುವಾಗಿ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಿ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 28-04-2008ರ ಸರ್ಕಾರಿ ಆದೇಶದಲ್ಲಿ ಆರೋಪಿತರಾದ ಶ್ರೀ ಎಂ. ವಿ. ಕೃಷ್ಣಪ್ಪ, ಶ್ರೀ ಎಂ. ಎಲ್. ಶಿವಶಂಕರ್ ಮತ್ತು ಶ್ರೀ ಡಿ. ವಿ. ದೇವರಾಜ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಹಿಂದಿನ ನಿರ್ದೇಶಕರುಗಳು ನಿವೃತ್ತರಾಗಿರುವುದರಿಂದ ಇವರ ವಿರುದ್ಧ ವಿಚಾರಣೆ ಹೂಡಲು ಅವಕಾಶವಿರುವುದಿಲ್ಲ. ಆದ್ದರಿಂದ ಶ್ರೀ ಎಂ. ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಸ್ತುತ ಪ್ರಾಧ್ಯಾಪಕರು, ಮೈಸೂರು ಇವರ ವಿರುದ್ಧ ಮೇಲ್ಕಂಡ ಆರೋಪ ಕುರಿತು ಇಲಾಖಾ ವಿಚಾರಣೆ ಹಾಗೂ ವರದಿಗಾಗಿ ಪ್ರಕರಣವನ್ನು ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ 25-11-2009ರ ಪತ್ರದಲ್ಲಿ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಲ್ಲಿ ನಡೆಯಿತೆನ್ನಲಾದ ಕಾಮಗಾರಿಗಳಿಗೆ ನೀಡಿದ ಹಣ ದುರುಪಯೋಗ ಹಾಗೂ ಕರ್ತವ್ಯಲೋಪದ ಬಗ್ಗೆ ತನಿಖೆ ನಡೆಸಿ ಆರೋಪಿತರಾದ ಶ್ರೀ ಎಂ. ವಿ. ಕೃಷ್ಣಪ್ಪ ಇವರ ವಿರುದ್ಧ ಮಾಡಲಾದ ಯಾವುದೇ ಆರೋಪಗಳು ಸಾಬೀತಾಗಿರುವುದಿಲ್ಲ. "The charges leveled against the DGO have not been proved" ಎಂದು ವರದಿ ನೀಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ 05-12-2009ರ ಪತ್ರದಲ್ಲಿ ಶ್ರೀ ಎಂ. ವಿ. ಕೃಷ್ಣಪ್ಪ ಇವರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲವೆಂಬ ವಿಚಾರಣಾ ವರದಿಯನ್ನು ಅಂಗೀಕರಿಸಿ ಸದರಿ ಆಪಾದಿತರನ್ನು ದೋಷಮುಕ್ತರೆಂದು ಆದೇಶಿಸಲು ಮಾನ್ಯ ಲೋಕಾಯುಕ್ತರು ಶಿಫಾರಸ್ಸು ಮಾಡಿರುವರು.

ವಿಚಾರಣಾಧಿಕಾರಿಗಳಿಂದ ಬಂದಿರುವ ವರದಿಯನ್ನು ಮತ್ತು ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ಮಾಡಲಾಗಿರುವ ಎಲ್ಲಾ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳ ವರದಿಯಿಂದ ವ್ಯಕ್ತವಾಗುತ್ತದೆ. ವಿಚಾರಣಾಧಿಕಾರಿಗಳ ವರದಿಯನ್ನು ಹಾಗೂ ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 182 ಕೆಎಂಯು 2007, ಬೆಂಗಳೂರು, ದಿನಾಂಕ: 22ನೇ ಮೇ, 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಎಂ. ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರನ್ನು ಸದರಿ ಆಪಾದನೆಗಳಿಂದ ದೋಷಮುಕ್ತರೆಂದು ಪರಿಗಣಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 1423

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀಮತಿ ಗುಂಡಮ್ಮ ಕೋಂ ದಿ॥ ವಿನಾಯಕ ಎ.ಪಿಸಿ., ಡಿ.ಎ.ಆರ್. ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ** :

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್ ಇವರ ಆದೇಶ ಸಂಖ್ಯೆ : ಸಿಬ್ಬಂದಿ 4/9/ಡಿಇ/2008, ದಿನಾಂಕ 21-02-09.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ : ಅಪೀಲು/18/ಈವ/2009 ಅ.ಪು.ಸಂ : 528/ಈವ/2009, ದಿ. 06-08-2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ. 20-11-09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)69/2009-10, ದಿನಾಂಕ 05-3-10.

**ಪ್ರಸ್ತಾವನೆ :**

ಶ್ರೀ ವಿನಾಯಕ ಎ.ಪಿ.ಸಿ.-129, ಡಿ.ಎ.ಆರ್. ಬೀದರ್, ಇವರು ಹಾಗೂ ಇತರೇ 7 ಸಿಬ್ಬಂದಿಗಳ ವಿರುದ್ಧ ಕರ್ತವ್ಯದಲ್ಲಿ ಗಂಭೀರ ದುರ್ನಡತೆ ಎಸಗಿರುವ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ 8ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಸಲಾಗಿತ್ತು.

**ದೋಷಾರೋಪಣೆ :**

"ನೀವುಗಳಾದ ಆ.ಪೊ.ಆ. 1. ಶ್ರೀ ಬಾಬುರಾವ ಎ.ಎಚ್.ಸಿ.–45, 2. ಸಂಜು, ಎ.ಪಿ.ಸಿ.–302, 3. ವಿನಾಯಕ್, ಎ.ಪಿಸಿ.–129, 4. ಶಿವರಾಜ, ಎ.ಪಿ.ಸಿ.–313 ಮತ್ತು 5. ಸೈಮನ್, ಎಪಿಸಿ–185 ಎಲ್ಲರೂ ಡಿ.ಎ.ಆರ್. ಬೀದರ ರವರುಗಳಿಗೆ ದಿನಾಂಕ 31–05–2008ರಂದು ಜಿಲ್ಲಾ ಸರಕಾರಿ ಆಸ್ಪತ್ರೆಯಲ್ಲಿ ವಿಚಾರಣಾಧೀನ ಖೈದಿಗಳ ಗಾರ್ಡ್ ಕರ್ತವ್ಯಕ್ಕೆಂದು ನೇಮಕ ಮಾಡಲಾಗಿದ್ದು ಅವರು ತಮ್ಮ ಕರ್ತವ್ಯವನ್ನು ಕರ್ನಾಟಕ ಪೊಲೀಸ್ ಕೈಪಿಡಿಯ (ಆದೇಶ ಸಂಖ್ಯೆ 681(4)(7)(8) ಪ್ರಕಾರ ಜವಾಬ್ದಾರಿಯುತವಾಗಿ ನಿರ್ವಹಿಸಲು ವಿಫಲವಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ವಹಿಸಿದ್ದಲ್ಲದೇ ಆಸ್ಪತ್ರೆಯಲ್ಲಿ ಚಿಕಿತ್ಸೆಗೆಂದು ದಾಖಲಾದ ಘೋರ ಪ್ರಕರಣದ ಆರೋಪಿ ವಿಚಾರಣಾಧೀನ ಕೈದಿ ಕಿಶೋರ ತಂದೆ ಬಾಬುರಾವ ಸಾ: ಚಾಂಡೇಶ್ವರ ಎಂಬಾತನೊಂದಿಗೆ ಶಾಮೀಲಾಗಿ, ಅವನೊಂದಿಗೆ ಸರಾಯಿ ಕುಡಿದು ಅವನು ರಾತ್ರಿ ಅಂದಾಜು 1000 ರಿಂದ 1100ರ ಮಧ್ಯಾವಧಿಯಲ್ಲಿ ಆಸ್ಪತ್ರೆಯಿಂದ ತಪ್ಪಿಸಿಕೊಂಡು ಓಡಿ ಹೋಗಲು ಉದ್ದೇಶಪೂರ್ವಕವಾಗಿ ಸಹಾಯ ಮಾಡಿರುತ್ತಾರೆ. ಅಲ್ಲದೇ ನೈಜ ಘಟನೆಯನ್ನು ತಿರುಚಲು ಪ್ರಯತ್ನಿಸಿ ಮೇಲಾಧಿಕಾರಿಗಳಿಗೆ ಮತ್ತು ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಬೀದರ್‌ರವರುಗಳಿಗೆ ಈ ಬಗ್ಗೆ ತಪ್ಪು ಮಾಹಿತಿ ಸಲ್ಲಿಸಿ ಗಂಭೀರ ದುರ್ನಡತೆ ಎಸಗಿರುವಿರಿ ಇತ್ಯಾದಿ. ನೀವುಗಳಾದ ಆ.ಪೊ.ಅ.–6, ಶ್ರೀ ಶಿವಪ್ಪಾ, ಎ.ಎಚ್.ಸಿ.–1, 7. ಶಾಂತಕುಮಾರ ಎಪಿಸಿ–319 ಮತ್ತು 8, ಅನೀಲ ಎಪಿಸಿ–225 ಎಲ್ಲರೂ ಡಿ.ಎ.ಅರ್. ಬೀದರರವರುಗಳು ದಿನಾಂಕ 31–05–08 ರಂದು ರಾತ್ರಿ ಅಂದಾಜು 8–30 ರಿಂದ 11–00ರ ಮಧ್ಯಾವಧಿಯಲ್ಲಿ ಅನಧಿಕೃತವಾಗಿ ಜಿಲ್ಲಾ ಸರಕಾರಿ ಆಸ್ಪತ್ರೆಯಲ್ಲಿರುವ ವಿಚಾರಣಾಧೀನ ಕೈದಿಗಳ ಕೋಣೆಗೆ ಹೋಗಿ ಈ ಮೇಲೆ ಹೇಳಲಾದ ಗಾರ್ಡ್ (ಆ.ಪೊ.ಅ.–1 ರಿಂದ ಆ.ಪೊ.ಅ.–8ರವರೆಗೆ) ಸಿಬ್ಬಂದಿಯವರೊಂದಿಗೆ ಮತ್ತು ಘೋರ ಪ್ರಕರಣದ ಆರೋಪಿ ಮತ್ತು ವಿಚಾರಣಾಧೀನ ಕೈದಿ ಕಿಶೋರ ತಂದೆ ಬಾಬುರಾವ ಸಾ: ಚಾಂಡೇಶ್ವರ ಎಂಬಾತನೊಂದಿಗೆ ಸರಾಯಿ ಕುಡಿದು ಅವನೊಂದಿಗೆ ಶಾಮೀಲಾಗಿ ಅವನು ಆಸ್ಪತ್ರೆಯಿಂದ ತಪ್ಪಿಸಿಕೊಂಡು ಓಡಿ ಹೋಗಲು ಪ್ರಚೋದನೆ ನೀಡಿದ್ದಲ್ಲದೇ ಉದ್ದೇಶಪೂರ್ವಕವಾಗಿ ಸಹಾಯ ಮಾಡಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 21–02–09ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ ದಿನಾಂಕ 18–06–2008 ರಿಂದ 19–08–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ 06–08–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಆ.ಪೊ.ಆ. ರವರು ದಿನಾಂಕ 16–5–2009 ರಂದು ನಿಧನ ಹೊಂದಿರುವುದಾಗಿ ತಿಳಿಸಿ ಅವರ ಪರವಾಗಿ ಅವರ ಪತ್ನಿಯಾದ ಶ್ರೀಮತಿ ಗುಂಡಮ್ಮ ಎಂಬುವವರು ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 213 ಪೊಸಿಅ 2009, ಬೆಂಗಳೂರು, ದಿನಾಂಕ: 28ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರ ಅಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಗುಂಡಮ್ಮ ಕೋಂ ದಿ. ವಿನಾಯಕ ಎ.ಪಿ.ಸಿ., ಡಿ.ಎ.ಆರ್. ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ.ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1424 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಚ್. ಡಿ. ನಾಗರಾಜು, ಎಚ್.ಸಿ. ಅರಸೀಕೆರೆ, ಹಾಸನ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ. ಇವರ ಆದೇಶ ಸಂಖ್ಯೆ: ಸಿಬ್ಬಂದಿ(1) ಪಿಆರ್–1/08–09, ಓಬಿ : 11/09, ದಿನಾಂಕ 24–04–09.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು/30/2009–10, ಓ.ಬಿ. 25/2009–10, ದಿನಾಂಕ 30–07–09.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 26–09–09

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)47/2009–10, ದಿನಾಂಕ 21–12–2009.

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 229 ಸಿಎನ್ಎಸ್ 09, ದಿನಾಂಕ 06–5–2010.

**ಪ್ರಸ್ತಾವನೆ :**

ಶ್ರೀ ಎಚ್. ಡಿ. ನಾಗರಾಜು, ಎಚ್.ಸಿ.–49. ಇವರು ಬಾಣಾವರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಶ್ರೀ ಎಚ್. ಡಿ. ನಾಗರಾಜು, ಸಿ.ಎಚ್.ಸಿ.–49 ಆದ ನೀವು ಗಂಡಸಿ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ನೀವು ಈ ಹಿಂದೆ ಬಾಣಾವರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ನಿಮಗೆ ನೀಡಲಾಗಿದ್ದ ಪೊಲೀಸ್ ವಸತಿಗೃಹವನ್ನು ನೀವು ದಿನಾಂಕ 10–11–08 ರಂದು ಖಾಲಿ ಮಾಡಿಕೊಂಡು ಹೋಗಿದ್ದು, ನಂತರ ವಸತಿಗೃಹವನ್ನು ಪರಿಶೀಲನೆ ಮಾಡಲಾಗಿ ಮುಂಬಾಗಿಲಿನ ಡೋರ್‌ಲಾಕ್ ತೆಗೆದಿದ್ದು, ಬಾಗಿಲ ಮರವು ಜಖಂ ಆಗಿರುತ್ತದೆ ಮತ್ತು ಸ್ನಾನದ ಮನೆಯು ಸಂಪೂರ್ಣ ಜಖಂಗೊಂಡಿದ್ದು, ವಿದ್ಯುತ್ ಬಿಲ್ ಬಾಕಿ ರೂ. 85/– ಇದ್ದು, ಒಟ್ಟಾರೆ ರೂ. 2000/– ನಷ್ಟವುಂಟು ಮಾಡಿ ತೀವ್ರತರವಾದ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 24–04–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಪಡೆಯುವ ವಾರ್ಷಿಕ ವೇತನ ಬಡ್ತಿಗಳಿಗೆ ಬಾಧಕವಾಗದಂತೆ ಒಂದು ವರ್ಷದ ಕಾಲ ಮುಂದೂಡುವ ದಂಡನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 30–07–09ರಲ್ಲಿ ವಿಧಿಸಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಸರ್ಕಾರವು ಪರಿಗಣಿಸಿ ದಂಡನಾದೇಶವನ್ನು ಮಾರ್ಪಡಿಸಲು ತೀರ್ಮಾನಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 171 ಪೊಸಿಅ 2009, ಬೆಂಗಳೂರು, ದಿನಾಂಕ: 28ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರ ಅಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಚ್. ಡಿ. ನಾಗರಾಜು, ಎಚ್.ಸಿ., ಅರಸೀಕೆರೆ, ಇವರಿಗೆ ಮೇಲ್ಮನವಿ ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ "ವಾಗ್ದಂಡನೆ" ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ.ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1425 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ** : ಶ್ರೀ ಬಿ. ರಮೇಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿತ್ರದುರ್ಗ ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರಾತಿ ಮಾಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಅಧಿಸೂಚನೆ ಸಂ.: ಲಾ 97 ಪಿಪಿಇ 97, ದಿನಾಂಕ 29–01–1998

2) ಸರ್ಕಾರದ ಆದೇಶ ಸಂ:ಲಾ 171 ಪಿಪಿಇ 2001, ದಿನಾಂಕ 21–12–2002

3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿ.ಶಾ.1/198 (14)/2007–08, ದಿನಾಂಕ 18–02–2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ಕ್ರ.ಸಂ. 14ರನ್ವಯ ಶ್ರೀ ಬಿ. ರಮೇಶ್ ರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು ದಿನಾಂಕ 07–02–1998ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದ ಅನುಬಂಧದ ಕ್ರ.ಸಂ. (2)ರ ಅನ್ವಯ ಶ್ರೀ ಬಿ. ರಮೇಶ್‌ರವರು ದಿನಾಂಕ 24–05–2001ರಂದು ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ 18–02–2009ರ ಪತ್ರದಲ್ಲಿ, ಶ್ರೀ ಬಿ. ರಮೇಶ್‌ರವರು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಗೊಂಡಿರುತ್ತಾರೆ. ದಿನಾಂಕ 07–02–1993ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡು, ದಿನಾಂಕ 06–02–2008ರ ವರೆಗೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ 10 ವರ್ಷಗಳ ನಿರಂತರ ಸೇವೆಯನ್ನು ಪೂರೈಸಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ ಅಥವಾ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ, ಸದರಿ ಅಧಿಕಾರಿಗೆ ಈ ಹಿಂದೆ ಯಾವುದೇ ಬಡ್ತಿಯನ್ನು ನೀಡಿರುವುದಿಲ್ಲ ಅಥವಾ ಸದರಿಯವರು ಬಡ್ತಿಯನ್ನು ನಿರಾಕರಿಸಿರುವುದಿಲ್ಲ ಹಾಗೂ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಅಥವಾ ಹೂಡುವ ಸಂಭವಿರುವುದಿಲ್ಲ. ದಿನಾಂಕ 07–02–2008ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. ಹೀಗಾಗಿ ಸದರಿಯವರು ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿಗೆ ಸರ್ಕಾರದ ಅಧಿಕೃತ ಜ್ಞಾಪನ ಸಂ.ಎಫ್‌ಡಿ 1 ಎಸ್‌ಅರ್‌ಪಿ 85, ದಿನಾಂಕ 22–01–85ರಲ್ಲಿ ವಿಧಿಸಿರುವ ನಿಬಂಧನೆಗಳನ್ನು ಪೂರೈಸಿದಂತಾಗಿದ್ದು, ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿ ಸೌಲಭ್ಯಕ್ಕೆ ಅರ್ಹರಿರುತ್ತಾರೆ. ಆದ್ದರಿಂದ ಶ್ರೀ ಬಿ. ರಮೇಶ್ ರವರಿಗೆ ದಿನಾಂಕ 7–2–2008 ರಿಂದ ಜಾರಿಗೆ ಬರುವಂತೆ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿ, ಕಾಲಕಾಲಕ್ಕೆ ವೇತನವನ್ನು ನಿಗದಿಪಡಿಸುವಂತೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 140 ಪಿಪಿಇ 2009, ಬೆಂಗಳೂರು, ದಿನಾಂಕ: 31ನೇ ಮೇ, 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ. ರಮೇಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿತ್ರದುರ್ಗ, ಇವರಿಗೆ ಕರ್ನಾಟಕ ನಾಗರೀಕ ಸೇವೆಗಳು (ಕಾಲಬದ್ಧ ಮುಂಬಡ್ತಿ) ನಿಯಮಗಳು 1983ರನ್ವಯ ದಿನಾಂಕ 07–02–2008ರಿಂದ ಜಾರಿಗೆ ಬರುವಂತೆ ರೂ. 11400–300–12300–350–14400–400–16800–450–19500–525–21600 ರಿಂದ ಆಯ್ಕೆ ಕಾಲಿಕ ವೇತನ ಶ್ರೇಣಿಯಾದ ರೂ. 12000–300–12300–350–14400–400–16800–450–19500–525–22650ರ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 1426

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ** : ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಶ್ರೀ ಎ. ಎನ್. ಮುಧೋಲ್ಕರ್ ಇವರಿಗೆ ಒದಗಿಸುವ ಬಗ್ಗೆ.

**ಓದಲಾಗಿದೆ** : 1) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ : A7/BMB/YND/CR-1/08-09, ದಿನಾಂಕ 11–03–2009.

**ಪ್ರಸ್ತಾವನೆ :**

ಕೆನರಾ ವೃತ್ತದ ಹಳಿಯಾಳ, ಕಾರವಾರ ಮತ್ತು ಯಲ್ಲಾಪುರ ವಿಭಾಗಗಳು ಮತ್ತು ಬೆಳಗಾಂ ವೃತ್ತ, ಬೆಳಗಾಂ ವಿಭಾಗದಲ್ಲಿ ಇಲಾಖಾವತಿಯಿಂದ ಟೆಂಕೆ ಡಿಪೋಗಳಲ್ಲಿ ಸಂಗ್ರಹಿಸುವ ಮತ್ತು ಖರೀದಿದಾರರೇ ಸಂಗ್ರಹಿಸಬಹುದಾದ ಬೊಂಬುಗಳನ್ನು ತೆರೆಯಲು ಟೆಂಡರ್ ಕರೆಯಲಾಗಿತ್ತು. ಆದರೆ ಯಾವುದೇ ವ್ಯಕ್ತಿಗಳಾಗಲೀ/ಸಂಸ್ಥೆಗಳಾಗಲೀ ಟೆಂಡರ್‌ನಲ್ಲಿ ಭಾಗವಹಿಸದ ಕಾರಣ ದಿನಾಂಕ 27–05–2009 ರಂದು ಮರು ಟೆಂಡರ್ ಕರೆದಿದ್ದು. ಮೂವರು ಟೆಂಡರ್‌ದಾರರು ಭಾಗವಹಿಸಿದ್ದು ದರ ಮತ್ತು ಪ್ರಮಾಣವನ್ನು ಕಡಿಮೆ ಸೂಚಿಸಿದ್ದರಿಂದ ದಿನಾಂಕ 24–06–2009 ರಂದು ನಡೆದ ಸಂಧಾನದ ವೇಳೆ ದರ ಮತ್ತು ಪ್ರಮಾಣವನ್ನು ಪರಿಷ್ಕರಿಸಲು ಒಪ್ಪಿಗೆ ನೀಡಿರುತ್ತಾರೆ. ಆದರೆ ಕೆನರಾ ವೃತ್ತ, ಕಾರವಾರ ವಿಭಾಗ ವ್ಯಾಪ್ತಿಯ ಜೋಯಿಡಾ ಯೂನಿಟ್‌ನ 1 ರಿಂದ 4 ಕ್ಕೆ ಸಂಬಂಧಿಸಿದಂತೆ ಟೆಂಡರ್‌ದಾರರು ದರಗಳನ್ನು ಸೂಚಿಸಿರುವುದಿಲ್ಲ. ಆದರೆ ಸಂಧಾನದ ವೇಳೆಯಲ್ಲಿ ಒಂದು ಮೆಟ್ರಿಕ್ ಟನ್‌ಗೆ ರೂ. 325–00 ದರದಂತೆ ತೆಗೆಯುವುದಾಗಿ, ಶ್ರೀ ಎ. ಎನ್. ಮುಧೋಲ್ಕರ್ ಇವರು ಮನವಿ ಸಲ್ಲಿಸಿರುತ್ತಾರೆ. ಆದುದರಿಂದ ಶ್ರೀ ಎ. ಎನ್. ಮುಧೋಲ್ಕರ್ ಇವರಿಗೆ ರೂ. 325–00 ದರದಲ್ಲಿ 19,010 ಮೆಟ್ರಿಕ್ ಟನ್ ಒಣಗಿದ ಹಾಗೂ ಹೂಬಿಟ್ಟ ಬೊಂಬುಗಳನ್ನು ತೆಗೆಯಲು ಅನುಮೋದನೆಯನ್ನು ನೀಡಲು ಪ್ರಧಾನ ಅರಣ್ಯ ಸಂರಕ್ಷಣಾಧಿಕಾರಿಯವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ, ಸಂರಕ್ಷಣಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: 36 ಎಫ್‌ಡಿಪಿ 2009, ಬೆಂಗಳೂರು, ದಿನಾಂಕ: 28ನೇ ಮೇ, 2010**

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಎ. ಎನ್. ಮುಧೋಲ್ಕರ್ ಇವರಿಗೆ ಕೆನರಾ ವೃತ್ತದ ಕಾರವಾರ ವಿಭಾಗದ ಜೋಯಿಡಾ ಯೂನಿಟ್ 1 ರಿಂದ 4 ರಲ್ಲಿ 19,010 ಮೆಟ್ರಿಕ್ ಟನ್ ಒಣ ಬೊಂಬುಗಳನ್ನು ಪ್ರತಿ ಮೆಟ್ರಿಕ್ ಟನ್‌ಗೆ ರೂ. 325–00 ದರದಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆಗಳ ನಿಗಮದ ಮುಖಾಂತರ ಸರಬರಾಜು ಮಾಡಲು ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಗೋಪಾಲ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 1427

**ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವಾಲಯ**

**ವಿಷಯ** : 2009–10ನೇ ಸಾಲಿನಲ್ಲಿ ಪರಿಸರ ರಕ್ಷಣೆ ಮತ್ತು ವ್ಯವಸ್ಥಾಪನ ಕ್ಷೇತ್ರಗಳಲಿ ವಿಶಿಷ್ಟ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ಪ್ರದಾನ ಮಾಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಅಪಜೀ 1, ಇಎನ್‌ಜಿ 2010, ದಿನಾಂಕ 06–03–2010

2) ಪತ್ರಿಕಾ ಪ್ರಕಟಣೆ ದಿನಾಂಕ 10–03–2010

3) ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಸಭೆಯ ದಿನಾಂಕ 10–05–2010ರ ಸಭೆಯ ನಡವಳಿಗಳು

**ಪ್ರಸ್ತಾವನೆ :**

ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಮತ್ತು ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವ ಸಲುವಾಗಿ 2009–2010ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ನೀಡಲು ಸರ್ಕಾರವು ಉದ್ದೇಶಿಸುತ್ತದೆ. ಈ ಪ್ರಶಸ್ತಿ ತಲಾ ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ, ಟ್ರಸ್ಟುಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು

(2) ಪರಿಸರ ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಆರಂಭಶೀಲತೆ/ಕೊಡುಗೆ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ರೀತಿ ವಿಶಿಷ್ಟ ಸೇವೆ ಸಲ್ಲಿಸಿರುವವರಿಂದ ಮತ್ತು ಅದರ ಬಗ್ಗೆ ಅರಿವಿರುವವರಿಂದ ಅರ್ಜಿ/ನಾಮನಿರ್ದೇಶನ ಕೋರಿ ದಿನಾಂಕ 10-03-2010ರಂದು ಪತ್ರಿಕಾ ಪ್ರಕಟಣೆ ಹೊರಡಿಸಲಾಗಿತ್ತು. ಈ ಪ್ರಕಟಣೆಗೆ ಪ್ರತಿಕ್ರಿಯಿಸಿ ಸಲ್ಲಿಸಲಾಗಿದ್ದ ಅರ್ಜಿ/ನಾಮನಿರ್ದೇಶನಗಳನ್ನು ಪರಿಶೀಲಿಸಿ ಅರ್ಹ ವ್ಯಕ್ತಿ/ಸಂಸ್ಥೆಗಳನ್ನು ಆಯ್ಕೆ ಮಾಡಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಮೇಲೆ (1)ರಲ್ಲಿ ಓದಲಾದ ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ಸದರಿ ಸಮಿತಿಯು ದಿನಾಂಕ 27-04-2010ರ ಮತ್ತು 10-05-2010ರಂದು ಸಭೆ ನಡೆಸಿ, 2009-10ನೇ ಸಾಲಿನ ರಾಜ್ಯ ಪರಿಸರ ಪ್ರಶಸ್ತಿಗೆ ತನ್ನ ಶಿಫಾರಸ್ಸನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ.

ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಶಿಫಾರಸ್ಸುಗಳನ್ನು ಪರಿಗಣಿಸಿ, ಪ್ರಶಸ್ತಿ ಪುರಸ್ಕೃತಿ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಅಂತಿಮಗೊಳಿಸಲಾಗಿದೆ. ಅದರಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 1 ಇಎನ್‌ಜಿ 2010, ಬೆಂಗಳೂರು, ದಿನಾಂಕ: 01ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಸರ ಸಂರಕ್ಷಣೆ ಮತ್ತು ಪರಿಸರ ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಕೆಳಕಂಡ ವ್ಯಕ್ತಿ ಮತ್ತು ಸಂಸ್ಥೆಗಳಿಗೆ 2009-10ನೇ ಸಾಲಿನ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಆಯ್ಕೆ ಮಾಡಿದೆ. ಸದರಿ ಪ್ರಶಸ್ತಿಯು ರೂ. 1.00 ಲಕ್ಷ (ಒಂದು ಲಕ್ಷ ರೂ. ಮಾತ್ರ) ನಗದು ಮತ್ತು ಪ್ರಶಸ್ತಿ ಪತ್ರ ಒಳಗೊಂಡಿರುತ್ತದೆ.

1. ಶ್ರೀ ಮೋಹನರಾಮಕೃಷ್ಣ ಹೆಗಡೆ,
   ಹೊಲನಗದ್ದೆ, ಕುಮಟಾ ತಾಲ್ಲೂಕು
   ಉತ್ತರ ಕನ್ನಡ ಜಿಲ್ಲೆ,
2. ಶ್ರೀ ಈಶ್ವರ್ ಪ್ರಸಾದ್ ಬಿ.
   ಸ್ಫೂರ್ತಿವನ-ಪರಿಸರ, ಬಿಡಬ್ಲ್ಯೂಎಸ್‌ಎಸ್‌ಬಿ-ಸಿಐಎಫ್,
   18ನೇ ಕ್ರಾಸ್, ಮಲ್ಲೇಶ್ವರ, ಬೆಂಗಳೂರು.
3. ಶ್ರೀ ಬಿ. ಎಸ್. ರಂಗನಾಥ್
   ಬಿನ್ ಬಿ. ಮೂಡ್ಲಯ್ಯ, ಕೃಷಿಕರು
   ಹರಿಯಬ್ಬೆ ಗ್ರಾಮ, ಹಿರಿಯೂರು ತಾಲ್ಲೂಕು
   ಚಿತ್ರದುರ್ಗ ಜಿಲ್ಲೆ.
4. ಗ್ರಾಮಾಂತರ ಸಮುದಾಯ ವಿಜ್ಞಾನ ಕೇಂದ್ರ (ರಿ)
   ಶೇಡ್ತಿಕೆರೆ, ಅಂಚೆ : ವರದಾ ಮೂಲ-577417,
   ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.
5. ಮೆ॥ ಔಟ್ ರೀಚ್
   ನಂ. 109, ಕೋಲ್ಸ್ ರಸ್ತೆ,
   ಫ್ರೇಜರ್ ಟೌನ್, ಬೆಂಗಳೂರು-560 005.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಬಿ. ಮನೋಹರ್)**
ಸರ್ಕಾರದ ಅಧೀನ ಕಾರ್ಯದರ್ಶಿ
(ಜೀವಿಶಾಸ್ತ್ರ ಮತ್ತು ಪರಿಸರ)
ಪಿ.ಆರ್. 1428 ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ

**ಜಲಸಂಪನ್ಮೂಲ ಸಚಿವಾಲಯ**

**ವಿಷಯ** : ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು ಅತಗೂರು ಹೋಬಳಿ, ಅಂಕನಾಥಪುರ ಏತ ನೀರಾವರಿ ಯೋಜನೆಗಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಪಾವತಿಸುವ ಕುರಿತು.

**ಓದಲಾಗಿದೆ** : ದಿನಾಂಕ 03-04-10ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರದ ಸಂಖ್ಯೆ : ಮುಸದ/ಲೆಶಾಖೆ/ಲೆಸ-1/ಭೂಸ್ವಾಧೀನ/09-10/822.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 03-04-10ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು ಅತಗೂರು ಹೋಬಳಿ, ಅಂಕನಾಥಪುರ ಏತ ನೀರಾವರಿ ಯೋಜನೆಯಲ್ಲಿ ಕೈಬಿಟ್ಟಿರುವ ಅಂಕನಾಥಪುರ ಗ್ರಾಮದ ಸ.ನಂ. 162, 165ರ ಒಟ್ಟು 0-34 ಎಕರೆ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ

ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡವಾಗಿ ರೂ. 86,234–00 ಗಳನ್ನು ಠೇವಣಿ ಮಾಡಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಕಂದಾಯ ಇಲಾಖೆಯ ಸುತ್ತೋಲೆ ಸಂಖ್ಯೆ : ಕಂಇ 42 ಭೂಸ್ವಾಹಾ 2000, ದಿನಾಂಕ 08–10–2001ರಲ್ಲಿ ಸೂಚಿಸಿರುವಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಂಭವನೀಯ ವೆಚ್ಚದ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣೆ ಮಾಡಬೇಕಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 128 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ: 28ನೇ ಮೇ, 2010**

ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು ಅತಗೂರು ಹೋಬಳಿ, ಅಂಕನಾಥಪುರ ಏತ ನೀರಾವರಿ ಯೋಜನೆಯಲ್ಲಿ ಕೈಬಿಟ್ಟಿದ್ದ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಒಟ್ಟು ಮುಂಗಡ ಹಣ ರೂ. 86,234–00 ಗಳನ್ನು (ಎಂಭತ್ತಾರು ಸಾವಿರದ ಇನ್ನೂರ ಮೂವತ್ತ್ನಾಲ್ಕು ರೂ.ಗಳು ಮಾತ್ರ) ಕಾಮಗಾರಿಗೆ ಅಗತ್ಯವಿರುವ ಭೂಸ್ವಾಧೀನದ ವಿಸ್ತೀರ್ಣದ ಬಗ್ಗೆ ದೃಢೀಕರಿಸಿಕೊಂಡು ಅದಕ್ಕನುಗುಣವಾಗಿ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡುವ ಸಲುವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1429 ಜಲಸಂಪನ್ಮೂಲ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ** : ಯಾದಗಿರಿ ಜಿಲ್ಲೆಯಲ್ಲಿ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯ ಜಿಲ್ಲಾ ಕಛೇರಿ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಅಧಿಸೂಚನೆ ಸಂಖ್ಯೆ : ಕಂಇ 59 ಭೂದಾಪು 2008, ದಿನಾಂಕ 26–12–2009.

2) ನಿರ್ದೇಶಕರು, ಬಂಡವಾಲ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ : ಸ.ಉ.ಸಿ. (2)18/2009–10, ದಿನಾಂಕ 26–10–2009 ಮತ್ತು ದಿನಾಂಕ 22–4–2010.

3) ಸರ್ಕಾರಿ ಆದೇಶ ಸಂ. ಆಇ 25 ಸಉಲಾ 2010, ದಿನಾಂಕ 21–4–2010

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ ಯಾದಗಿರಿ ಪಟ್ಟಣವನ್ನು ಕೇಂದ್ರಸ್ಥಾನವನ್ನಾಗಿರಿಸಿ ದಿನಾಂಕ 30–12–2009 ರಿಂದ ಜಾರಿಗೆ ಬರುವಂತೆ ಹೊಸದಾಗಿ ಯಾದಗಿರಿ ಜಿಲ್ಲೆಯನ್ನು ರಚಿಸಿ ಅಧಿಸೂಚನೆ ಹೊರಡಿಸಲಾಗಿದೆ. ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಹೊಸದಾಗಿ ರಚನೆಯಾದ ಯಾದಗಿರಿ ಜಿಲ್ಲೆಯಲ್ಲಿ ಕೆಳಕಂಡ ಸಿಬ್ಬಂದಿ ವರ್ಗದವರೊಂದಿಗೆ ಜಿಲ್ಲಾ ವಿಮಾ ಕಛೇರಿಯನ್ನು ಪ್ರಾರಂಭಿಸಲು ಆದೇಶ ಹೊರಡಿಸುವಂತೆ ಕೋರಿ ಬಂಡವಾಳ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರ. ಸಂ. | ಹುದ್ದೆಗಳು | ವೇತನ ಶ್ರೇಣಿ | ಅಧಿಕಾರಿ ಮತ್ತು ನೌಕರರ ಸಂಖ್ಯೆ | ಗುಲ್ಬರ್ಗಾ ಜಿಲ್ಲೆಯಿಂದ ಮರುವಿನ್ಯಾಸಗೊಳಿಸುವ ಹುದ್ದೆಗಳು | ಹೊಸದಾಗಿ ಸೃಜಿಸ ಬೇಕಾದ ಹುದ್ದೆಗಳು |
|---|---|---|---|---|---|
| 1. | ಸಹಾಯಕ ನಿರ್ದೇಶಕರು | 11400–21600 | 1 | – | 1 |
| 2. | ಅಭಿವೃದ್ಧಿ ಅಧಿಕಾರಿ | 10000–18150 | 1 | 1 | – |
| 3. | ಸಹಾಯಕ ಅಭಿವೃದ್ಧಿ ಅಧಿಕಾರಿ | 7275–13350 | 2 | 2 | – |

| | | | | | |
|---|---|---|---|---|---|
| 4. | ದ್ವಿತೀಯ ದರ್ಜೆ ಸಹಾಯಕರು/ಬೆರಳಚ್ಚುಗಾರರು | 5800–10500 | 1 | – | 1 |
| 5. | ವಾಹನ ಚಾಲಕ | 5800–10500 | 1 | – | 1 |
| 6. | ದಲಾಯತ್ | 4800–7275 | 1 | – | 1 |
| | ಒಟ್ಟು | | **7** | **3** | **4** |

ಮೇಲ್ಕಂಡ ವಿವರಗಳಂತೆ ಯಾದಗಿರಿ ಜಿಲ್ಲಾ ಕಛೇರಿಗೆ ಒಟ್ಟು 7 ಹುದ್ದೆಗಳ ಅವಶ್ಯಕತೆ ಇದ್ದು ಅದರಲ್ಲಿ ಗುಲ್ಬರ್ಗಾ ಜಿಲ್ಲೆಯಿಂದ 3 ಹುದ್ದೆಗಳನ್ನು ಮರು ವಿನ್ಯಾಸಗೊಳಿಸುವಂತೆ (Re-deployment) ಹಾಗೂ 4 ಹುದ್ದೆಗಳನ್ನು ಹೊಸದಾಗಿ ಸೃಜಿಸುವಂತೆ ನಿರ್ದೇಶಕರು, ಬಂಡವಾಳ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯಲಾಟರಿ ಇಲಾಖೆ, ಇವರು ಕೋರಿರುತ್ತಾರೆ.

ಮೇಲಿನ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಂಡವಾಳ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ನಿರ್ದೇಶನಾಲಯವನ್ನು ಮರು ವಿನ್ಯಾಸಗೊಳಿಸಿ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ-ಋಣ ನಿರ್ವಹಣೆ ನಿರ್ದೇಶನಾಲಯ ಎಂದು ಪುನರ್ ರಚಿಸಿ ಆದೇಶಿಸಲಾಗಿದೆ.

ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 27 ಸಉಲಾ 2010, ಬೆಂಗಳೂರು, ದಿನಾಂಕ: 3ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹೊಸದಾಗಿ ರಚಿಸಿರುವ ಯಾದಗಿರಿ ಜಿಲ್ಲೆಯಲ್ಲಿ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ-ಋಣ ನಿರ್ವಹಣೆ ಇಲಾಖೆಯ ಜಿಲ್ಲಾ ಕಛೇರಿಯನ್ನು ಕೆಳಕಂಡ ಹುದ್ದೆಗಳೊಂದಿಗೆ ಪ್ರಾರಂಭಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹುದ್ದೆಗಳು | ವೇತನ ಶ್ರೇಣಿ | ಅಧಿಕಾರಿ ಮತ್ತು ನೌಕರರ ಸಂಖ್ಯೆ | ಗುಲ್ಬರ್ಗಾ ಜಿಲ್ಲೆಯಿಂದ ಮರುವಿನ್ಯಾಸಗೊಳಿಸಲಾದ ಹುದ್ದೆಗಳು | ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಹೊಸದಾಗಿ ಸೃಜಿಸಲಾದ ಹುದ್ದೆಗಳು |
|---|---|---|---|---|---|
| 1. | ಸಹಾಯಕ ನಿರ್ದೇಶಕರು | 11400–21600 | 1 | – | 1 |
| 2. | ಅಭಿವೃದ್ಧಿ ಅಧಿಕಾರಿ | 10000–18150 | 1 | 1 | – |
| 3. | ಸಹಾಯಕ ಅಭಿವೃದ್ಧಿ ಅಧಿಕಾರಿ | 7275–13350 | 2 | 2 | – |
| 4. | ದ್ವಿತೀಯ ದರ್ಜೆ ಸಹಾಯಕರು/ಬೆರಳಚ್ಚುಗಾರರು | 5800–10500 | 1 | – | 1 |
| 5. | ದಲಾಯತ್ | 4800–7275 | 1 | – | 1 |
| | ಒಟ್ಟು | | **6** | **3** | **3** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎನ್. ಶ್ರೀನಿವಾಸ ಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1485 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರಿ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 48 ಸಸಿವಿ 02, ದಿನಾಂಕ 07-03-2003
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 48 ಸಸಿವಿ 02, ದಿನಾಂಕ 03-06-2003
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 17 ಸಸಿವಿ 04, ದಿನಾಂಕ 06-01-2005
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸಸಿವಿ 05, ದಿನಾಂಕ 14-07-2005
5. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 10 ಸಸಿವಿ 06, ದಿನಾಂಕ 25-02-2005
6. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 50 ಸಸಿವಿ 06, ದಿನಾಂಕ 27-06-2006
7. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 17 ಸಸಿವಿ 07, ದಿನಾಂಕ 20-03-2007
8. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 626 ಸಅಸೇ 07, ದಿನಾಂಕ 01-03-2008
9. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 534 ಸಅಸೇ 2009, ದಿನಾಂಕ 03-11-2009
10. ಸಾರ್ವಜನಕ ಉದ್ದಿಮೆಗಳ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಾಉಇ 15 ಎಂಇಎ 2007, ದಿನಾಂಕ 06-05-2010.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಸಾರ್ವಜನಿಕ ಉದ್ದಿಮೆ ಇಲಾಖೆಯಲ್ಲಿ ಹುದ್ದೆಗಳನ್ನು ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿ 51 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 07–03–2009 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (10)ರ ಅನಧಿಕೃತ ಟಿಪ್ಪಣಿಯಲ್ಲಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿನ 51 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 07–03–2010 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಹಾಗೂ ತಾಂತ್ರಿಕ ಮತ್ತು ಮೌಲ್ಯ ಮಾಪನ ವಿಭಾಗದಲ್ಲಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಯೇ ಸೃಜಿಸಿದ 8 ಹುದ್ದೆಗಳನ್ನು ದಿನಾಂಕ 26–08–2009 ರಿಂದ ಮುಂದುವರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 272 ಸಅಸೇ 2010, ಬೆಂಗಳೂರು, ದಿನಾಂಕ: 07ನೇ ಜೂನ್, 2010**

ಕರ್ನಾಟಕ ಸರ್ಕಾರದ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿನ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 07–03—2010 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಜಂಟಿ ಕಾರ್ಯದರ್ಶಿ | 01 |
| 2. | ಅರ್ಥಿಕ ಸಲಹೆಗಾರರು | 01 |
| 3. | ಉಪ ಕಾರ್ಯದರ್ಶಿ | 01 |
| 4. | ಅಧೀನ ಕಾರ್ಯದರ್ಶಿ | 02 |
| 5. | ಶಾಖಾಧಿಕಾರಿ | 03 |
| 6. | ಪತ್ರಾಂಕಿತ ಆಪ್ತ ಸಹಾಯಕರು | 01 |
| 7. | ಭಾಷಾಂತರಕಾರರು (ಶಾಖಾಧಿಕಾರಿ) | 01 |
| 8. | ಹಿರಿಯ ಸಹಾಯಕರು | 02 |
| 9. | ಸಹಾಯಕ ಸಾಂಖ್ಯಿಕ ಅಧಿಕಾರಿ | 01 |
| 10. | ಶೀಘ್ರಲಿಪಿಗಾರರು (ಗಣಕಯಂತ್ರ ಜ್ಞಾನವನ್ನು ಹೊಂದಿರುವವರು) | 12 |
| 11. | ಡಾಟಾ ಎಂಟ್ರಿ ಆಪರೇಟರ್ | 02 |
| 12. | ಸಹಾಯಕರು | 03 |
| 13. | ಕಿರಿಯ ಸಹಾಯಕರು | 05 |
| 14. | ಬೆರಳಚ್ಚುಗಾರರು | 01 |
| 15. | ಚಾಲಕರು | 04 |
| 16. | ದಲಾಯತ್ | 11 |
| | **ಒಟ್ಟು** | **51** |

ಈ ಆದೇಶವನ್ನು ಸರ್ಕಾರದ ಅದೇಶ ಸಂಖ್ಯೆ : ಎಫ್.ಡಿ 1 ಟಿಎಫ್‌ಪಿ 96, ದಿನಾಂಕ 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಚ್. ಆರ್. ನಾಗೇಂದ್ರ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1486 ಸಿಬ್ಬಂದಿ ಮತ್ತು ಅಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಸೃಜಿಸಲಾಗಿರುವ ಬಾಲ ಕಾರ್ಮಿಕರ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 100 ಸಸಿವಿ 1997, ದಿನಾಂಕ 17–06–1997
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 19 ಸಸಿವಿ 2004, ದಿನಾಂಕ 19–11–2004
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 343 ಸಅಸೇ 2009, ದಿನಾಂಕ 10–07–2009
4. ಕಾರ್ಮಿಕ ಇಲಾಖೆಯ ಕಡತ ಸಂಖ್ಯೆ : ಕಾಇ 46 ಸಿಎಲ್‌ಸಿ 2009

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಬಾಲ ಕಾರ್ಮಿಕ ಕೋಶವನ್ನು ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 18-06-2009 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 01 |
| 2. | ಉಪ ವಿಶೇಷಾಧಿಖಾರಿ (ವೇತನ ಶೇಣಿ ರಹಿತ ಹುದ್ದೆ) | 01 |
| 3. | ಸಹಾಯಕರು | 02 |
| 4. | ಶೀಘ್ರಲಿಪಿಗಾರರು | 01 |
| 5. | ವಾಹನ ಚಾಲಕರು | 01 |
| 6. | ಗ್ರೂಪ್-ಡಿ | 01 |

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಕಾರ್ಮಿಕ ಇಲಾಖೆಯ ಕಡತದಲ್ಲಿ ಬಾಲ ಕಾರ್ಮಿಕ ಕೋಶ ಹಾಗೂ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 280 ಸಅಸೇ 2010, ಬೆಂಗಳೂರು, ದಿನಾಂಕ: 07ನೇ ಜೂನ್, 2010**

ಕರ್ನಾಟಕ ಸರ್ಕಾರದ ಸಚಿವಾಲಯ ಕಾರ್ಮಿಕ ಇಲಾಖೆಯಲ್ಲಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ 18-06-2010 ರಿಂದ ಒಂದು ವರ್ಷ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 01 |
| 2. | ಉಪ ವಿಶೇಷಾಧಿಕಾರಿ (ವೇತನ ಶೇಣಿ ರಹಿತ ಹುದ್ದೆ) | 01 |
| 3. | ಸಹಾಯಕರು | 02 |
| 4. | ಶೀಘ್ರಲಿಪಿಗಾರರು | 01 |
| 5. | ವಾಹನ ಚಾಲಕರು | 01 |
| 6. | ಗ್ರೂಪ್-ಡಿ | 01 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್.ಡಿ. 1 ಟಿಎಫ್‌ಪಿ 96, ದಿನಾಂಕ 10-07-1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಚ್. ಆರ್. ನಾಗೇಂದ್ರ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1487 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ** : ನೂತನ ಜಿಲ್ಲೆಯಾಗಿ ರಚನೆಗೊಂಡಿರುವ ಯಾದಗಿರಿಗೆ ಹೊಸದಾಗಿ ಹುದ್ದೆಗಳನ್ನು ಸೃಜಿಸುವ ಹಾಗೂ ಗುಲ್ಬರ್ಗಾ ಜಿಲ್ಲೆಯಿಂದ ಹುದ್ದೆಗಳನ್ನು ಮರುವಿನ್ಯಾಸಗೊಳಿಸುವಿಕೆ.

**ಓದಲಾಗಿದೆ** :
1. ಅಧಿಸೂಚನ ಸಂಖ್ಯೆ : ಆರ್‌ಡಿ 59 ಭೂದಾಪು 2008, ದಿನಾಂಕ 15-09-2009
2. ಅರೆ ಸರ್ಕಾರಿ ಪತ್ರ ಸಂಖ್ಯೆ : ವಿಯಾಜಿ/ಸಿಬ್ಬಂದಿ/01-2009-10, ದಿನಾಂಕ 28-09-2009
3. ಸರ್ಕಾರಿ ಆದೇಶ ಸಂಖ್ಯೆ : ಕಂಇ 71 ಭೂದಾಪು 2009, ದಿನಾಂಕ 23-02-2010
4. ಪತ್ರ ಸಂಖ್ಯೆ : ಸಿಬ್ಬಂದಿ (1)87/2009-10, ದಿನಾಂಕ 22-03-2010 ಮತ್ತು 31-05-2010

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ ಯಾದಗೀರ್, ಶಹಾಪುರ ಹಾಗೂ ಶೋರಾಪುರ್ ತಾಲ್ಲೂಕುಗಳನ್ನೊಳಗೊಂಡಂತೆ ಹೊಸದಾಗಿ ಯಾದಗೀರ್ ಜಿಲ್ಲೆಯನ್ನು ರಚಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ವಿಶೇಷ ಅಧಿಕಾರಿಗಳು, ಯಾದಗೀರ್ ಜಿಲ್ಲೆ, ಇವರು ಮೀನುಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ನೂತನವಾಗಿ ಸೃಜನೆಯಾಗಿರುವ ಯಾದಗೀರ್ ಜಿಲ್ಲೆಗೆ ಅಗತ್ಯ ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡುವಂತೆ ಹಾಗೂ ಹೊಸದಾಗಿ ಸೃಜಿಸಿದ ಎಲ್ಲಾ ಹುದ್ದೆಗಳಿಗೆ ಸಿಬ್ಬಂದಿಯನ್ನು ಭರ್ತಿ ಮಾಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯು ಯಾದಗಿರಿ ಜಿಲ್ಲೆಯಲ್ಲಿ ವಿವಿಧ ಇಲಾಖೆಗಳಿಗೆ ಸಂಬಂಧಿಸಿದಂತೆ ಸಿಬ್ಬಂದಿ ಮಾದರಿ ರಚನೆ ಅನ್ವಯ ಅವಶ್ಯಕವಿರುವ ಹುದ್ದೆಗಳಲ್ಲಿ ಶೇ. 25 ರಷ್ಟು ಹುದ್ದೆಗಳನ್ನು ಸದ್ಯಕ್ಕೆ ಅಡ್–ಹಾಕ್ ಆಧಾರದ ಮೇಲೆ ಸೃಜಿಸಲು ಮಂಜೂರಾತಿ ನೀಡಿದೆ ಹಾಗೂ ಸಂಬಂಧಪಟ್ಟ ಇಲಾಖೆಗಳು ಅವಶ್ಯಕತೆ ಇರುವ ಹುದ್ದೆಗಳನ್ನು ಗುರುತಿಸಿ ಪ್ರತ್ಯೇಕವಾಗಿ ಆದೇಶ ಹೊರಡಿಸಿ ಶೀಘ್ರವಾಗಿ ಭರ್ತಿ ಮಾಡಿಕೊಳ್ಳುವಂತೆ ಮತ್ತು ಈ ಹುದ್ದೆಗಳಿಗೆ ಆಯವ್ಯಯ ಅವಕಾಶವನ್ನು ಸಹ ಕಲ್ಪಿಸಲು ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರಗಳಲ್ಲಿ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಇವರು ಹೊಸ ಯಾದಗಿರಿ ಜಿಲ್ಲೆಯಲ್ಲಿ ಪ್ರಾರಂಭಿಸಬೇಕಾದ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಕಛೇರಿಗೆ ಹೊಸದಾಗಿ 07 ವಿವಿಧ ವರ್ಗದ ಹುದ್ದೆಗಳನ್ನು ಅಂದರೆ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು–01 ಹುದ್ದೆ (ವೇತನ ಶ್ರೇಣಿ ರೂ. 14050–25050) ಅಧೀಕ್ಷಕರು–01 ಹುದ್ದೆ (ವೇತನ ಶ್ರೇಣಿ ರೂ. 10000–18150), ಪ್ರಥಮ ದರ್ಜೆ ಸಹಾಯಕರು–01 ಹುದ್ದೆ (ವೇತನ ಶ್ರೇಣಿ ರೂ. 7275–13350), ದ್ವಿತೀಯ ದರ್ಜೆ ಸಹಾಯಕರು–01 ಹುದ್ದೆ (ವೇತನ ಶ್ರೇಣಿ ರೂ. 5800–10500), ಬೆರಳಚ್ಚುಗಾರರು–01 ಹುದ್ದೆ (ವೇತನ ಶ್ರೇಣಿ ರೂ. 5800–10500+90), ವಾಹನ ಚಾಲಕರು–01 ಹುದ್ದೆ (ವೇತನ ಶ್ರೇಣಿ ರೂ.5800–10500+90) ಮತ್ತು ಅಟೆಂಡರ್/'ಡಿ' ದರ್ಜೆ ನೌಕರರು–01 ಹುದ್ದೆ (ವೇತನ ಶ್ರೇಣಿ ರೂ. 4800–7275)ಗಳನ್ನು ಸೃಜಿಸಲು ಮತ್ತು ಗುಲ್ಬರ್ಗಾ ಜಿಲ್ಲೆಯಿಂದ ವಿವಿಧ ವರ್ಗದ 13 ಹುದ್ದೆಗಳನ್ನು ಮರುವಿನ್ಯಾಸಗೊಳಿಸಿ ಒಟ್ಟು 20 ಹುದ್ದೆಗಳಿಗೆ ತಗಲಬಹುದಾದ ವೇತನ ಮತ್ತು ಭತ್ಯೆಗಳನ್ನು ಭರಿಸಲು ಬೇಕಾದ ಯೋಜನೇತರ ವೆಚ್ಚ ಹಾಗೂ ಯೋಜನಾ ವಿವರಗಳನ್ನು ಸಲ್ಲಿಸುತ್ತಾ, ಸದರಿ ಬಾಬ್ತುಗಳಿಗೆ ಅನುದಾನ ಅವಕಾಶ ಕಲ್ಪಿಸುವಂತೆ ಹಾಗೂ ಅಡ್–ಹಾಕ್ ಆಧಾರದ ಮೇಲೆ ಅದರಲ್ಲಿ ಶೇ. 25 ಅಂದರೆ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು–01 ಹುದ್ದೆ, ಬೆರಳಚ್ಚುಗಾರರು–01 ಹುದ್ದೆ ಹೀಗೆ ಒಟ್ಟು 02 ಹುದ್ದೆಗಳನ್ನು ಸೃಜಿಸಲು ಹಾಗೂ ಪ್ರಥಮ ದರ್ಜೆ ಸಹಾಯಕರ–01 ಹುದ್ದೆ, ದ್ವಿತೀಯ ದರ್ಜೆ ಸಹಾಯಕರ–01 ಹುದ್ದೆ ವಾಹನ ಚಾಲಕರು–01 ಹುದ್ದೆ ಮತ್ತು 'ಡಿ' ದರ್ಜೆ ನೌಕರರ–01 ಹುದ್ದೆ ಒಟ್ಟು–04 ಹುದ್ದೆಗಳನ್ನು ಮೀನುಗಾರಿಕೆ ಇಲಾಖೆ ಗುಲ್ಬರ್ಗಾ ಜಿಲ್ಲೆಯಿಂದ ಯಾದಗಿರಿ ಜಿಲ್ಲೆಗೆ ಮರುವಿನ್ಯಾಸಗೊಳಿಸಲು ಕೋರಿರುತ್ತಾರೆ.

ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಯಾದಗಿರಿ ಜಿಲ್ಲೆಗೆ ಅವಶ್ಯಕವಿರುವ 20 ಹುದ್ದೆಗಳ ಪೈಕಿ ಶೇ. 25 ಅಂದರೆ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು–01 ಹುದ್ದೆ, ಬೆರಳಚ್ಚುಗಾರರು–01 ಹುದ್ದೆ ಒಳಗೊಂಡಂತೆ ಒಟ್ಟು 02 ಹುದ್ದೆಗಳನ್ನು ಅಡ್–ಹಾಕ್ ಆಧಾರದ ಮೇಲೆ ಸೃಜಿಸಲು ಹಾಗೂ ಪ್ರಥಮ ದರ್ಜೆ ಸಹಾಯಕರ–01 ಹುದ್ದೆ, ದ್ವಿತೀಯ ದರ್ಜೆ ಸಹಾಯಕರ–01 ಹುದ್ದೆ, ವಾಹನ ಚಾಲಕರು–01 ಹುದ್ದೆ ಮತ್ತು 'ಡಿ' ದರ್ಜೆ ನೌಕರರ–01 ಹುದ್ದೆಯನ್ನೊಳಗೊಂಡಂತೆ ಒಟ್ಟು 04 ಹುದ್ದೆಗಳನ್ನು ಮೀನುಗಾರಿಕೆ ಇಲಾಖೆ ಗುಲ್ಬರ್ಗಾ ಜಿಲ್ಲೆಯಿಂದ ಯಾದಗಿರಿ ಜಿಲ್ಲೆಗೆ ಮರುವಿನ್ಯಾಸಗೊಳಿಸಲು ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ/195/ಮೀಇಸೇ/2009, ಬೆಂಗಳೂರು, ದಿನಾಂಕ: 05ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ನೂತನವಾಗಿ ರಚನೆಗೊಂಡಿರುವ ಯಾದಗಿರಿ ಜಿಲ್ಲೆಯ ಮೀನುಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡ 02 ಹುದ್ದೆಗಳನ್ನು ಅಡ್–ಹಾಕ್ (Ad-hoc) ಆಧಾರದ ಮೇಲೆ ಸೃಜಿಸಲು ಹಾಗೂ ಪ್ರಥಮ ದರ್ಜೆ ಸಹಾಯಕರು–01 (ಒಂದು) ಹುದ್ದೆ (ವೇತನ ಶ್ರೇಣಿ ರೂ. 7,275–13,350) ದ್ವಿತೀಯ ದರ್ಜೆ ಸಹಾಯಕರು–01 (ಒಂದು) ಹುದ್ದೆ (ವೇತನ ಶ್ರೇಣಿ ರೂ. 5,800–10,500) ವಾಹನ ಚಾಲಕರು–01 (ಒಂದು) ಹುದ್ದೆ (ವೇತನ ಶ್ರೇಣಿ ರೂ. 5800–10500+90) ಮತ್ತು 'ಡಿ' ದರ್ಜೆ ನೌಕರರು–01 (ಒಂದು) (ವೇತನ ಶ್ರೇಣಿ ರೂ. 4800–7275) ಹುದ್ದೆಯನ್ನೊಳಗೊಂಡಂತೆ ಒಟ್ಟು 04 (ನಾಲ್ಕು) ಹುದ್ದೆಗಳನ್ನು ಮೀನುಗಾರಿಕೆ ಇಲಾಖೆ, ಗುಲ್ಬರ್ಗಾ ಜಿಲ್ಲೆಯಿಂದ ಯಾದಗಿರಿ ಜಿಲ್ಲೆಗೆ ಮರುವಿನ್ಯಾಸಗೊಳಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1. | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು | ರೂ. 14050–25050 | 01 (ಒಂದು) |
| 2. | ಬೆರಳಚ್ಚುಗಾರರು | ರೂ. 5,800–10,500+90 | 01 (ಒಂದು) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಡಿ. ಎಂ. ರಾಜಣ್ಣ)**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

ಪಿ.ಆರ್. 1488

## ಇಂಧನ ಸಚಿವಾಲಯ

**ವಿಷಯ** : ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 2.0 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಅದೇಶ ಸಂಖ್ಯೆ : ಇಂಇ 297 ಎನ್‌ಸಿಇ 2004, ದಿನಾಂಕ 13-09-2004

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಶೋಕಾಸ್ ನೋಟಿಸ್/2010/ದಿನಾಂಕ 17-04-2010

3. ಕಾರಣ ಕೇಳುವ ನೋಟಿಸು ಸಂಖ್ಯೆ : ಇಎನ್ 179 ಎನ್‌ಸಿಇ 2010, ದಿನಾಂಕ 26-04-2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ರಾಯಚೂರು ಇಲ್ಲೆಯ ದೇವದುರ್ಗ ತಾಲ್ಲೂಕಿನ ಲಿಂಗದಹಳ್ಳಿ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಲಿಂಗದಹಳ್ಳಿ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕಾರಣ ಕೇಳುವ ನೋಟಿಸಿನಲ್ಲಿ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ನೋಟಿಸನ್ನು ನೀಡಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು. ಆದರೆ, ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರು ಕಾರಣ ಕೇಳುವ ನೋಟಿಸನ್ನು ಸ್ವೀಕರಿಸಿದ್ದು, ನಿಗದಿತ ಅವಧಿಯೊಳಗೆ ಸಮಜಾಯಿಷಿ/ಉತ್ತರವನ್ನು ನೀಡಿರುವುದಿಲ್ಲ.

ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರು ಮೇಲ್ಕಂಡ ಯೋಜನೆಯನ್ನು ಅನುಷ್ಠಾನ ಮಾಡುವ ನಿಟ್ಟಿನಲ್ಲಿ ಯಾವುದೇ ಆಸಕ್ತಿ ವಹಿಸಿರುವುದಿಲ್ಲ ಮತ್ತು ಯಾವುದೇ ಪ್ರಗತಿಯನ್ನು ಸಾಧಿಸಿರುವುದಿಲ್ಲವೆಂದು ಭಾವಿಸಿ, ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ :-

**ಸರ್ಕಾರಿ ಆದೇಶ ಸಂಖ್ಯೆ: ಇನ್ 179 ಎನ್‌ಸಿಇ 2010, ಬೆಂಗಳೂರು, ದಿನಾಂಕ: 05ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಇಂಇ 297 ಎನ್‌ಸಿಇ 2004 ದಿನಾಂಕ 13-09-2004ರಲ್ಲಿ ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಲಿಂಗದಹಳ್ಳಿ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ ಹಂಚಿಕೆಯಾಗಿದ್ದ 2.0 ಮೆಗಾ ವ್ಯಾಟ್ ಸಾಮರ್ಥ್ಯದ ಲಿಂಗದಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಅದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 1489

## ಇಂಧನ ಸಚಿವಾಲಯ

**ವಿಷಯ** : ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಅದೇಶ ಸಂಖ್ಯೆ : ಇಂಇ 100 ಎನ್‌ಸಿಇ 2004, ದಿನಾಂಕ 11-03-2004 ಮತ್ತು ದಿನಾಂಕ 09-09-2004.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಶೊಕಾಸ್ ನೋಟಿಸ್/2010/1706, ದಿನಾಂಕ 17-04-2010

3. ಕಾರಣ ಕೇಳುವ ನೋಟಿಸು ಸಂಖ್ಯೆ : ಇಎನ್ 142 ಎನ್‌ಸಿಇ 2010, ದಿನಾಂಕ 26-04-2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ತುಲಗಿ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 2 ಮೆಗಾ

ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿದ್ದು ತದನಂತರ ಸಾಮರ್ಥ್ಯವನ್ನು 24.75 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಯೋಜನೆಯು ಹಂಚಿಕೆಯಾಗಿದ್ದು ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ನೊಟೀಸನ್ನು ನೀಡಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು. ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರು ಕಾರಣ ಕೇಳುವ ನೋಟಿಸನ್ನು ಸ್ವೀಕರಿಸಿದ್ದು, ನಿಗದಿತ ಅವಧಿಯೊಳಗೆ ಸಮಜಾಯಿಷಿ/ಉತ್ತರವನ್ನು ನೀಡಿರುವುದಿಲ್ಲ.

ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರು ಮೇಲ್ಕಂಡ ಯೋಜನೆಯನ್ನು ಅನುಷ್ಠಾನ ಮಾಡುವ ನಿಟ್ಟಿನಲ್ಲಿ ಆಸಕ್ತಿವಹಿಸಿರುವುದಿಲ್ಲ ಮತ್ತು ಯಾವುದೇ ಪ್ರಗತಿಯನ್ನು ಸಾಧಿಸಿರುವುದಿಲ್ಲವೆಂದು ಭಾವಿಸಿ, ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇನ್ 142 ಎನ್‌ಸಿಇ 2010, ಬೆಂಗಳೂರು, ದಿನಾಂಕ: 05ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಇಂಇ 100 ಎನ್‌ಸಿಇ 2004 ದಿನಾಂಕ 11–03–2004 ಹಾಗೂ ಆದೇಶ ಸಂಖ್ಯೆ : ಇಂಇ 100 ಎನ್‌ಸಿಇ 2004 ದಿನಾಂಕ 09–09–2004ರಲ್ಲಿ ಮೆ॥ ಪುಸಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ತುಲಗಿ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ ಹಂಚಿಕೆಯಾಗಿದ್ದ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಗೆ ಸಂಬಂಧಿಸಿದ ಅದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1490 ಇಂಧನ ಇಲಾಖೆ

**ಆರ್ಥಿಕ ಸಚಿವಾಲಯ**

**ವಿಷಯ :** ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು 5ನೇ ರಾಜ್ಯ ವೇತನ ಆಯೋಗವು ಮಾಡಿರುವ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 8 ಎಸ್‌ಆರ್‌ಪಿ 07, ದಿನಾಂಕ : 16–5–2007

2. ಸರ್ಕಾರಿ ಅಧಿಸೂಚನೆ ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ 07, ದಿನಾಂಕ : 16–5–2007

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 16–5–2007ರ ಸರ್ಕಾರಿ ಆದೇಶದಲ್ಲಿ 5ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸಿನ ಮೇರೆಗೆ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ದಿನಾಂಕ 1–7–2005 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ.

5ನೇ ರಾಜ್ಯ ವೇತನ ಆಯೋಗವು ಸಲ್ಲಿಸಿರುವ ತನ್ನ ಅಂತಿಮ ವರದಿಯಲ್ಲಿನ 2ನೇ ಸಂಪುಟದಲ್ಲಿ ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು ಶಿಫಾರಸ್ಸು ಮಾಡಿದೆ. ವೇತನ ಆಯೋಗವು ಮಾಡಿರುವ ಶಿಫಾರಸ್ಸನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 20 ಎಸ್‌ಆರ್‌ಪಿ 2010, ಬೆಂಗಳೂರು, ದಿನಾಂಕ : 3ನೇ ಜೂನ್ 2010**

2007ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳ ನಿಯಮ 4ರ ಉಪನಿಯಮ (2)ರ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕೆಳಗಿನ ಪಟ್ಟಿಯ ಅಂಕಣ (3)ರಲ್ಲಿ ನಿರ್ದಿಷ್ಟ ಪಡಿಸಿದ ಹುದ್ದೆಗಳಿಗೆ ಅನ್ವಯವಾಗುವ ವೇತನ ಶ್ರೇಣಿಯನ್ನು ಪಟ್ಟಿಯಲ್ಲಿನ ಅಂಕಣ (4)ರಲ್ಲಿ ನಮೂದಿಸಿರುವ ಪರಿಷ್ಕೃತ

ವೇತನ ಶ್ರೇಣಿಗೆ ಬದಲಾಗಿ ಅಂಕಣ (5)ರಲ್ಲಿ ನಮೂದಿಸಿರುವ ಸಂವಾದಿ ವೇತನ ಶ್ರೇಣಿ ಆಗಿರತಕ್ಕದ್ದೆಂದು ಈ ಮೂಲಕ ಆದೇಶಿಸಿದೆ.

| ಕ್ರಮ ಸಂಖ್ಯೆ | ಇಲಾಖೆ | ಹುದ್ದೆ | ಪ್ರಸ್ತುತ 2007ರ ವೇತನ ಶ್ರೇಣಿ ರೂ. | ಪರಿಷ್ಕೃತ 2007ರ ವೇತನ ಶ್ರೇಣಿ ರೂ. |
|---|---|---|---|---|
| 1 | 2 | 3 | 4 | 5 |
| 1 | ಪೌರಾಡಳಿತ | ಸಮುದಾಯ ಸಂಘಟಕರು | 5800–10500 | 7275–13350 |
| 2 | | ಸಮುದಾಯ ಸಂಘಟನಾಧಿಕಾರಿಗಳು | 7275–13350 | 10800–20025 |

2. ಈ ಆದೇಶದ ಮೂಲಕ ಮಂಜೂರು ಮಾಡಲಾದ ಪರಿಷ್ಕೃತ ವೇತನ ಶ್ರೇಣಿಗಳು ತಕ್ಷಣದಿಂದ ಜಾರಿಗೆ ಬರುತ್ತವೆ.

3. ಮೇಲಿನ ಪಟ್ಟಿಯಲ್ಲಿ ನಮೂದಿಸಿರುವ ಹುದ್ದೆಗಳನ್ನು ಧಾರಣ ಮಾಡಿರುವ ನೌಕರರ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 43ರಲ್ಲಿ ಕಲ್ಪಿಸಿರುವ ಅವಕಾಶಗಳ ಅನುಸಾರ ನಿಗದಿಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಸುಂದರ ರಾಜ ಗುಪ್ತ)**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

ಪಿ.ಆರ್. 1416

## ENERGY SECRETARIAT

### CORRIGENDUM

### No. EN 71 EMC-2/2010, Bangalore, Date : 26-5-2010

In the Order portion of the Government Order No. EN 392 NCE 2008 dated : 13-10-2009 the Sl.No. 4 of the table appearing as :-

| Sl. No | Source | Application Fee (per MW) | Processing Fee (per MW) | Transfer Fee (Per MW) | Time Extension Fee (Per MW) | Security Deposit (Per MW) |
|---|---|---|---|---|---|---|
| 4 | Cogeneration | 0.1 | 2.0 | 1.5 | 1st Year-1.0<br>2nd Year-2.0<br>3rd Year-3.0<br>4th Year-5.0<br>(Government will issue cancellation Order after 4th Year) | 1.0 (by way of Bank Guarantee) after all the approval/ clearances are obtained. If the projects are completed within the stipulated time the security deposit will be refunded, otherwise it will be forfeited to Government. |

**Shall be substituted and read as below :-**

| Sl. No | Source | Application Fee (per MW) | Processing Fee (per MW) | Transfer Fee (Per MW) | Time Extension Fee (Per MW) | Security Deposit (Per MW) |
|---|---|---|---|---|---|---|
| 4 | Cogeneration | 0.1 | NIL | NIL | NIL | NIL |

By Order and in the name of the Governor of Karnataka

**(S.J. Sampath kumar)**

Under Secretary to Government

Energy Department.

P.R. 1417

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ
## ಅಧಿಸೂಚನೆ

**ಸಂಖ್ಯೆ : ಆಕುಕ 274 ಹೆಚ್‌ಎಸ್‌ಹೆಚ್ 2010, ಬೆಂಗಳೂರು, ದಿನಾಂಕ : 2–6–2010**

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳನ್ನು ಎರಡು ವರ್ಷಗಳ ಎಂಪಿಹೆಚ್ ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ

**ಉಲ್ಲೇಖ :** 1) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಆಶಿತಮಾಅ/86/09–10, ದಿನಾಂಕ : 24–2–2010.

2) Course Co-ordinator, National Institute of Epidemiology, Chennai ಇವರ ಪತ್ರ ಸಂಖ್ಯೆ : NEI/F/02/03C/2010, ದಿನಾಂಕ : 14–5–2010

ಮೇಲೆ ಉಲ್ಲೇಖ (1)ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು National Institute of Epidemiology (NIE), Chennai ಇಲ್ಲಿ ಸಾರ್ವಜನಿಕ ಆರೋಗ್ಯ ವಿಷಯದಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಇಬ್ಬರು ವೈದ್ಯಾಧಿಕಾರಿಗಳು ಸಲ್ಲಿಸಿರುವ ನಾಮ ನಿರ್ದೇಶನವನ್ನು ಸರ್ಕಾರಕ್ಕೆ ಸಲ್ಲಿಸಿದ್ದರು. ಉಲ್ಲೇಖ (2)ರಲ್ಲಿ ಈ ಕೆಳಕಂಡ ಇಬ್ಬರು ವೈದ್ಯಾಧಿಕಾರಿಗಳು ಎಂಪಿಹೆಚ್ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಗೊಂಡಿದ್ದು, ಅವರುಗಳನ್ನು ನಿಯೋಜಿಸುವಂತೆ ಕೋರ್ಸ್ ಕೋ–ಆರ್ಡಿನೇಟರ್, ಎನ್.ಐ.ಇ. ಚೆನ್ನೈ ಇವರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, National Institute of Epidemiology (NIE), Chennai ಇಲ್ಲಿ ದಿನಾಂಕ : 1–7–2010 ರಿಂದ ಪ್ರಾರಂಭವಾಗಲಿರುವ 2 ವರ್ಷಗಳ MPH ಸ್ನಾತಕೋತ್ತರ ವ್ಯಾಸಂಗಕ್ಕೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್–II "ಎ' ನಿಯಮ I ರನ್ವಯ ನಿಯೋಜಿಸಲಾಗಿದೆ.

1. Dr. Ganesha H., District AIDS Prevention & Control Officer, Bangalore Rural.
2. Dr. Harishwara C.E., District AIDS Prevention & Contral Officer, Tumkur.

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ನಮೂನೆ–19 ಮತ್ತು 19–ಎ ರನ್ವಯ ಅಫಿಡವಿಟ್ ಮತ್ತು ಪೆನಾಲ್ಟಿ ಬಾಂಡ್ ಅನ್ನು ಪಡೆದು ನಂತರ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ವೈದ್ಯಾಧಿಕಾರಿಗಳನ್ನು ಕರ್ತವ್ಯದಿಂದ ಬಿಡುಗಡೆ ಮಾಡತಕ್ಕದ್ದು.

ಸದರಿ ಸೇವಾನಿರತ ವೈದ್ಯಾಧಿಕಾರಿಗಳಿಗೆ ಪ್ರತಿನಿಯೋಜನಾ ಸೌಲಭ್ಯ ಮಂಜೂರಾತಿಗಾಗಿ ಸಂಬಂಧಿಸಿದಂತೆ ಪರಿಶೀಲಿಸಿ ಪ್ರತ್ಯೇಕವಾಗಿ ಕ್ರಮಕೈಗೊಳ್ಳಲಾಗುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 02 ಎಸ್‌ಆರ್‌ಎ 2008 ದಿನಾಂಕ : 5–6–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 1418

**(ಐ. ಹೇಮನಾಥ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ಸೇವೆಗಳು–1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಗೃಹ ಕಛೇರಿಗಳಿಗೆ ಯು.ಪಿ.ಎಸ್.ಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ ಹೆಚ್‌ಸಿಎ II/11/2010, ದಿನಾಂಕ : 23ನೇ ಏಪ್ರಿಲ್, 2010

**ಪ್ರಸ್ತಾವನೆ :**

ಮೇಲೆ ಓದಲಾದ ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್ ಅವರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಮಾನ್ಯ ನ್ಯಾಯಾಧೀಶರ ಗೃಹ ಕಚೇರಿಗಳ ಉಪಯೋಗಕ್ಕಾಗಿ 1.5 ಕೆವಿಎ ಯುಪಿಎಸ್‌ಗಳನ್ನು 6 ಇಎಲ್ ಸಾಂದ್ರತೆಯ ಎರಡು ಬ್ಯಾಟರಿಗಳನ್ನು ಈ ಮೊದಲು ಆದೇಶ ಸಂ : ಸಿಆಸುಇ 11 ಸೇಉನ್ಯಾ 2002, ದಿನಾಂಕ : 9–10–2002 ರನ್ವಯ ಒದಗಿಸಿ ಅನುದಾನವನ್ನು ನೀಡಲಾಗಿದ್ದು, ಸದರಿ ಬ್ಯಾಟರಿಗಳ ಸಾಮರ್ಥ್ಯವು ಕ್ಷೀಣಿಸಿದ್ದು, ಇತ್ತೀಚೆಗೆ ಹೆಚ್ಚಾಗಿ

ವಿದ್ಯುಚ್ಛಕ್ತಿಯ ಸರಬರಾಜಿನ ವ್ಯತ್ಯಯವಾಗುತ್ತಿರುವ ಕಾರಣ ಪ್ರಸ್ತುತ ಇರುವ ಯುಪಿಎಸ್‌ಗಳ ಸಾಮರ್ಥ್ಯತೆಯು ಸಾಕಾಗುವುದಿಲ್ಲವಾದ್ದರಿಂದ ಹಾಗೂ ಹಾಳಾಗಿರುವುರಿಂದ, ಯುಪಿಎಸ್‌ಗಳನ್ನು ಸಂರಕ್ಷಿಸುತ್ತಿರುವ ಕಂಪನಿಯು ಬ್ಯಾಟರಿಗಳ ಸಾಮರ್ಥ್ಯತೆಯನ್ನು 1.5 ಕೆವಿಎ ಯಿಂದ 3.0 ಕೆವಿಎ ಹೆಚ್ಚಿಸಿದಲ್ಲಿ ಬ್ಯಾಟರಿಗಳ ದುರಸ್ತಿಯನ್ನು ತಪ್ಪಿಸಬಹುದೆಂದು ತಿಳಿಸಿ, ಗೃಹ ಕಛೇರಿಯಲ್ಲಿರುವ 1.5 ಕೆವಿಎ ಯುಪಿಎಸ್‌ಗೆ 6 ಇಎಲ್ ಸಾಂದ್ರತೆಯ ಎರಡು ಬ್ಯಾಟರಿಗಳು, 12 ವಿಎ, 150 ಎಹೆಚ್ ಎಎಂಪಿ ಎಕ್ಸೆಡ್ ಬ್ಯಾಟರಿಗಳು ಪ್ರತಿ ಯುಪಿಎಸ್‌ಗೆ ಇದ್ದು, ಅವುಗಳನ್ನು 3.0 ಕೆವಿಎ ಯುಪಿಎಸ್‌ಗಳಿಂದ ಸ್ಥಳಾಂತರಿಸಿದಲ್ಲಿ 6 ಇಎಲ್ ಸಾಂದ್ರತೆಯ ನಾಲ್ಕು ಬ್ಯಾಟರಿಗಳು ಬೇಕಾಗುವುದೆಂದು, ಅದರಂತೆ ಒಟ್ಟಾರೆ 80 ಅಂತಹ ಬ್ಯಾಟರಿಗಳನ್ನು ಖರೀದಿಸಬೇಕಾಗುವುದೆಂದು ಹಾಗೂ ಅವುಗಳ ಖರೀದಿಗೆ ಒಟ್ಟಾರೆ ರೂ. 20,98,480/– ಗಳ ಅನುದಾನದ ಅವಶ್ಯಕತೆಯಿರುವುದೆಂದು, ಸದರಿ ಮೊತ್ತದಲ್ಲಿ ಹಳೆಯ ಯುಪಿಎಸ್‌ಗಳನ್ನು ಮರು ಖರೀದಿಯಿಂದಾಗಿ ರೂ. 10,000/–ಗಳನ್ನು ಕಂಪನಿಯು ನೀಡುವುದನ್ನು ಕಳೆದು ರೂ. 20,88,480/– ರಷ್ಟು ಅನುದಾನವನ್ನು ನೀಡಬೇಕಾಗಿ ಕೋರಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 29 ಸೇಉನ್ಯಾ 2010, ಬೆಂಗಳೂರು, ದಿನಾಂಕ : 2–6–2010**

ಕರ್ನಾಟಕ ಉಚ್ಚ ನ್ಯಾಯಾಲಯದ ಮಾನ್ಯ ನ್ಯಾಯಾಧೀಶರುಗಳ ಗೃಹ ಕಛೇರಿಗಳ ಉಪಯೋಗಕ್ಕಾಗಿ 3.0 ಕೆವಿಎ ಸಾಮರ್ಥ್ಯದ 40 ಯುಪಿಎಸ್‌ಗಳು ಹಾಗೂ 80 ಸಂಖ್ಯೆಯ 6 ಇಎಲ್, 12ವಿಎ, 150 ಎಹೆಚ್ ಎಎಂಪಿ ಎಕ್ಸೆಡ್ ಬ್ಯಾಟರಿಗಳನ್ನು ಒಟ್ಟು ರೂ. 20,88,480/– (ರೂಪಾಯಿಗಳು ಇಪ್ಪತ್ತು ಲಕ್ಷದ ಎಂಬತ್ತೆಂಟು ಸಾವಿರದ ನಾನೂರ ಎಂಬತ್ತು ಮಾತ್ರ) ಗಳಿಗೆ ಖರೀದಿಸುವ ಪ್ರಸ್ತಾವನೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಮಯ–1999ರ ಅಧಿನಿಯಮದಲ್ಲಿನ ಪ್ರಕ್ರಿಯೆಯನ್ನು ಅನುಸರಿಸುವ ನಿಬಂಧನೆಗೊಳಪಟ್ಟು ಅನುಮೋದನೆ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014–00–102–0–08–180" ಅಡಿಯಲ್ಲಿ ಪ್ರಸ್ತುತ ಲಭ್ಯವಿರುವ ಅನುದಾನದಲ್ಲಿ ಭರಿಸತಕ್ಕದ್ದು ಹಾಗೂ ಪೂರಕ ಅಂದಾಜಿಗೆ ಪ್ರಸ್ತಾವನೆಯನ್ನು ಸಲ್ಲಿಸುವ ಸಮಯದಲ್ಲಿ ಹೆಚ್ಚುವರಿ ಅನುದಾನಕ್ಕಾಗಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : ಆಇ 396 ವೆಚ್ಚ–12/2010, ದಿನಾಂಕ : 19–5–2010ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 1419

**(ಎಚ್.ಆರ್. ನಾಗೇಂದ್ರ)**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**EDUCATION SECRETARIAT**

**Sub :** Issue of terms and conditions of appointment of Prof. M. Krishnappa, Registrar, Kuvempu University, Shankaraghatta.

**Read :** 1) Government Notification No. ED 119 USV 2009, dated 14-9-2009.

2) Letter dated 19-3-2010 from Prof. M. Krishnappa, Registrar, Kuvempu University, Shankaraghatta.

**Preamble :**

Prof. M. Krishnappa, Professor of Botany, Kuvempu University, Shankaraghatta, has been appointed as the Registrar vide Government Notification dated 14-9-2009 read (1) above, The Officer as reported for duty on 15-9-2009 at Kuvempu University, Shankaraghatta. He requested to issue terms and conditions of his appointment vide his letter dated 19-3-2010 read (2) above. The matter has been examined. Hence the following orders.

**ORDER NO. : ED 43 USV 2010, BANGALORE, DATED : 27-5-2010**

Government are pleased to issue the terms and conditions of appointment of Prof. M. Krishnappa, Professor of Batany, Kuvempu University, Shankaraghatta, as the Registrar, Kuvempu University, Shankaraghatta are as appended to this order.

By Order and in the name of the Governor of Karnataka

**(U.B. ULAVI)**

Under Secretary to Government

Higher Education Department.(Universities)

**APPENDIX TO G.O. NO. ED 43 USV 2010, DATED 27-5-2010**

TERMS AND CONDITIONS OF DEPUTATION OF PROF. M. KRISHNAPPA, PROFESSOR OF BOTANY, KUVEMPU UNIVERSITY, SHANKARAGHATTA AS THE REGISTRAR, KUVEMPU UNIVERSITY, SHANKARAGHATTA

1. **PERIOD :** The Period of service of Prof. M. Krishnappa, Professor of Botany, Kuvempu University, Shankaraghatta is for the period of three years or until further orders whichever is earlier.
2. **COMMENCEMENT AND END OF APPOINTMENT :** The Appointment shall commence with effect from 15-9-2009 and ends on the date he relinquishes his Office.
3. **PAY AND OTHER ALLOWANCES :** During the period of appointment, Prof. M. Krishnappa shall be entitled to draw own pay and grade admissible to him in his parent Organisation. Other allowances, such as DA/HRA/CCA as admissible under rules at the deputed place. He shall not be entitled to any other deputation or foreign service allowance.
4. **LEAVE RULES :** He shall be treated as vacation prevented staff governed by the leave rules as applicable to him.
5. **LEAVE SALARY CONTRIBUTION :** The Kuvempu Universiry, Shankaraghatta, shall pay Leave Salary Contribution at the rate of 11% of Pay.
6. **PENSION CONTRIBUTION :** Pension contribution shall be paid by the Kuvempu University, Shankaraghatta at the provisional rate at 12.5% on the total basic pay received during the period of deputation.
7. **MEDICAL CONCESSION :** The Official Shall be entitled to the medical attendance as per the Karnataka Government Servants (Medical Attendance) Rules, 1963.
8. **JOINING TIME :** He shall be entitled for joining time pay and transfer TA as per rules.
9. He shall perform the functions of Registrar and attend to all work entrusted to him from time to time by the Vice Chancellor, Kuvempu University, Shankaraghatta.
10. He shall perform his duties diligently and he shall maintain strict secrecy in respect of official information which he comes to know in the course of his duties.
11. He shall be liable to reimburse to Government all the losses which the Government may sustain due to misconduct of any sort on his part.

**(U.B. ULAVI)**
Under Secretary to Government
Higher Education Department.(Universities)

P.R. 1420

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಇ. ರಾಮಕೃಷ್ಣಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ (ಪ್ರಸ್ತುತ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್, ಮಾಲೂರು, ಕೋಲಾರ ಜಿಲ್ಲೆ) ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ನೋಟಿಸ್ ಸಂಖ್ಯೆ : ಸಿಆಸುಇ 54 ಎಸ್‌ಇಎನ್ 2005, ದಿನಾಂಕ : 18–2–2010
2. ಶ್ರೀ ಇ. ರಾಮಕೃಷ್ಣಪ್ಪ, ಅಧೀನ ಕಾರ್ಯದರ್ಶಿ ಇವರ ಪ್ರತಿರಕ್ಷಣಾ ಹೇಳಿಕೆ, ದಿನಾಂಕ : 26–3–2010

**ಪ್ರಸ್ತಾವನೆ :**

ಶ್ರೀ ಇ. ರಾಮಕೃಷ್ಣಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ (ಪ್ರಸ್ತುತ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್, ಮಾಲೂರು, ಕೋಲಾರ ಜಿಲ್ಲೆ) ಇವರು ಹಿಂದೆ ಶ್ರೀನಿವಾಸಪುರ ತಾಲ್ಲೂಕು ತಹಶೀಲ್ದಾರ್ ಹುದ್ದೆಯಲ್ಲಿ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿದ್ದಾಗ, ಈ ಕೆಳಕಂಡ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಮತ್ತು 11–ಎ ರ ಅನ್ವಯ ಮೇಲೆ (1) ರಲ್ಲಿ ಓದಲಾದ ದಿನಾಂಕ 18–2–2010ರ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

1. ಶ್ರೀನಿವಾಸಪುರ ತಾಲ್ಲೂಕು ಕಸಬಾ ಹೋಬಳಿ ಆವಲಕುಪ್ಪ ಗ್ರಾಮದ ಶ್ರೀ ಅಪ್ಪಯ್ಯ. ವಿ. ಬಿನ್ ವೆಂಟಕರಾಮನ್ನ ಇವರ ಜಮೀನುಗಳ ಖಾತೆ ಮಾಡಲು ಕಾನೂನು ಬಾಹಿರ ಆದೇಶ ಹೊರಡಿಸಿರುವ ಬಗ್ಗೆ.
2. ರೋಣೂರು ಹೋಬಳಿ ಯಚ್ಚನಪಲ್ಲಿ ಗ್ರಾಮದ ಸರ್ವೆ ನಂ. 58ರ ಜಮೀನನ್ನು ಅನಧಿಕೃತ ಸಾಗುವಳಿ ಸಕ್ರಮೀಕರಣ ಯೋಜನೆಯಡಿ ನಿಯಮಬಾಹಿರವಾಗಿ ಮಂಜೂರು ಮಾಡಲು ಕಾರಣರಾಗಿರುವ ಬಗ್ಗೆ
3. ನೆಲವಂಕಿ ಹೋಬಳಿ ಸುಣ್ಣಕಲ್ಲು ಗ್ರಾಮದ ಜಮೀನಿನ ಬಗ್ಗೆ ಸಾರ್ವಜನಿಕ ತಕರಾರು ಇದ್ದಾಗ್ಯೂ ಭೂ ಸಕ್ರಮೀಕರಣ ಸಮಿತಿ ಮೂಲಕ ನಿಯಮಗಳನ್ನು ಉಲ್ಲಂಘಿಸಿ ಮಂಜೂರು ಮಾಡಿರುವ ಬಗ್ಗೆ
4. ರೋಣೂರು ಹೋಬಳಿ ಚಾಂಪಲ್ಲಿ ಗ್ರಾಮದ ಸರ್ವೆ ನಂ. 169ರಲ್ಲಿನ ಸರ್ಕಾರಿ ಜಮೀನನ್ನು ನಿಯಮಬಾಹಿರವಾಗಿ ಖಾಸಗಿ ವ್ಯಕ್ತಿಗಳಿಗೆ ಖಾತೆ ಮಾಡಲು ಆದೇಶಿಸಿರುವ ಬಗ್ಗೆ
5. ಕಸಬಾ ಹೋಬಳಿ ಬಂಗವಾಡಿ ಗ್ರಾಮದ ಸರ್ವೆ ನಂ. 154ರ ಸರ್ಕಾರಿ ಜಮೀನನ್ನು ನಿಯಮಬಾಹಿರವಾಗಿ ಖಾತೆ ಮಾಡಿರುವ ಬಗ್ಗೆ
6. ಕಸಬಾ ಹೋಬಳಿ ಶ್ರೀನಿವಾಸಪುರಕ್ಕೆ ಸೇರಿದ ಅರಣ್ಯ ಇಲಾಖೆಗೆ ಸೇರಿದ ವಿವಿಧ ಸರ್ವೆ ನಂಬರುಗಳ ಜಮೀನುಗಳಲ್ಲಿ ನಿಯಮಬಾಹಿರವಾಗಿ ಅನಧಿಕೃತ ಸಾಗುವಳಿ ಸಕ್ರಮೀಕರಣ ಯೋಜನೆಯಲ್ಲಿ ಜಮೀನು ಮಂಜೂರು ಮಾಡಿ ಆದೇಶ ಹೊರಡಿಸಿರುವ ಬಗ್ಗೆ

ಮೇಲೆ ಕ್ರಮಸಂಖ್ಯೆ 2 ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಇ. ರಾಮಕೃಷ್ಣಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರು ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ತಮ್ಮ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಅಧಿಕಾರಿಯವರ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಅವರುಗಳು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಯಾವ ಅಂಶಗಳು ಕಂಡು ಬರುತ್ತಿಲ್ಲವಾದ ಹಿನ್ನೆಲೆಯಲ್ಲಿ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ, ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 54 ಎಸ್ಇಎನ್ 2005, ಬೆಂಗಳೂರು, ದಿನಾಂಕ : 22ನೇ ಮೇ 2010**

ಶ್ರೀ ಇ. ರಾಮಕೃಷ್ಣಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ (ಪ್ರಸ್ತುತ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್, ಮಾಲೂರು, ಕೋಲಾರ ಜಿಲ್ಲೆ) ಇವರ ವಿರುದ್ಧದ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಪ್ರಾದೇಶಿಕ ಆಯುಕ್ತರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಇದೇ ನಿಯಮಾವಳಿಗಳ ನಿಯಮ 11 (5) (ಸಿ)ರ ಅನ್ವಯ ಉಪವಿಭಾಗಾಧಿಕಾರಿ, ಕೋಲಾರ ಉಪವಿಭಾಗ, ಕೋಲಾರ, ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡುತ್ತದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಬಗ್ಗೆ ಸ್ಪಷ್ಟವಾದ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 1421

**(ಎಚ್.ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆಯ ಹುಮ್ನಾಬಾದ್ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಶ್ರೀ ಬಸವರಾಜ್ ಪಾಟೀಲ್, ಶಾಸಕರು ಇವರ ಮನವಿ.
2. ಸರ್ಕಾರದ ಪತ್ರ ಸಂಖ್ಯೆ : ಲಾ 74 ಎಲ್‌ಸಿಎಲ್ 2008, ದಿನಾಂಕ 1–7–08 ಹಾಗೂ 19–5–09
3. ಜಿಲ್ಲಾಧಿಕಾರಿ, ಬೀದರ್ ಇವರ ಪತ್ರ ಸಂಖ್ಯೆ : ಕಂ. ಜೆಯುಡಿ/ಸಿಆರ್ 50/09–10/8776, ದಿನಾಂಕ : 4–11–09
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರ ಪತ್ರ ಸಂಖ್ಯೆ : ಎಡಿಎಂ/131/09, ದಿನಾಂಕ : 17–3–10

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಬಸವರಾಜ್ ಪಾಟೀಲ್, ಎಂಎಲ್‌ಸಿ ಇವರು ಹುಮ್ನಾಬಾದ್‌ನಲ್ಲಿ ಪದವಿ ಕಾಲೇಜುಗಳು ಇತರೆ, ತರಬೇತಿ ಕೇಂದ್ರಗಳು, ಕೆಎಸ್‌ಆರ್‌ಟಿಸಿ ತರಬೇತಿ ಕೇಂದ್ರಗಳು, ದಂತ ಹಾಗೂ ಇತರೆ ಕಾಲೇಜುಗಳು ಸಹಾಯಕ ಕಮೀಷನರ್, ತಹಶೀಲ್ದಾರು, ಎಕ್ಸಿಕ್ಯೂಟಿವ್ ಇಂಜಿನಿಯರ್, ಪಿಡಬ್ಲ್ಯುಡಿ ಕೆಇಬಿ, ಸೀನಿಯರ್ ಸಿವಿಲ್ ಜಡ್ಜ್

ಪ್ರಧಾನ ಸಿ.ಜೆ. ಜ್ಯೂನಿಯರ್ ವಿಭಾಗ, ಅಡಿಷನಲ್ ಸಿ.ಜೆ. ಜಿಲ್ಲಾ ವಿಭಾಗದ ನ್ಯಾಯಾಲಯಗಳಿದ್ದು, ಹುಮ್ನಾಬಾದ್‌ನಲ್ಲಿ ಸಾರ್ವಜನಿಕರು ಹಾಲಿ ಇರುವ ಇಬ್ಬರು ನೋಟರಿಗಳಿದ್ದು ಬಹಳ ತೊಂದರೆ ಪಡುತ್ತಿರುವುದರಿಂದ ಇನ್ನೊಬ್ಬ ನೋಟರಿಯ ಅವಶ್ಯಕತೆ ಇದೆ ಎಂದು ಕೋರಿರುವುದರ ಮೇರೆಗೆ ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಜಿಲ್ಲಾಧಿಕಾರಿ ಹಾಗೂ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರುಗಳಿಂದ ವರದಿ/ಅಭಿಪ್ರಾಯ ಕೋರಲಾಗಿತ್ತು. ಅದರಂತೆ, ಮೇಲೆ (3)ರಲ್ಲಿ ಓದಲಾದ ದಿನಾಂಕ 4–11–09ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೀದರ್ ಇವರು ತಹಶೀಲ್ದಾರ್ ಹುಮ್ನಾಬಾದ್ ಇವರು ಹುಮ್ನಾಬಾದ್ ತಾಲ್ಲೂಕಿಗೆ ಇನ್ನು 4 ಜನ ಹೆಚ್ಚುವರಿ ನೋಟರಿಯವರ ಅವಶ್ಯಕತೆ ಇರುವುದಾಗಿ ತಿಳಿಸಿದ ವರದಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಮೇಲೆ (4)ರಲ್ಲಿ ಓದಲಾದ ದಿನಾಂಕ 17–3–2010ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರು ಹುಮ್ನಾಬಾದ್‌ನಲ್ಲಿ ರಾಜ್ಯ ಸರ್ಕಾರದ 2 ಹಾಗೂ ಕೇಂದ್ರ ಸರ್ಕಾರದ 1 ನೋಟರಿ ಕೆಲಸ ನಿರ್ವಹಿಸುತ್ತಿದ್ದು ಹೆಚ್ಚುತ್ತಿರುವ ವ್ಯಾಜ್ಯ ಹಾಗೂ ಕೆಲಸದ ಒತ್ತಡದ ಪ್ರಯುಕ್ತ ಹುಮ್ನಾಬಾದ್ ತಾಲ್ಲೂಕಿಗೆ ಮತ್ತೊಂದು ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆ ಎಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 74 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ : 29–5–2010**

ಬೀದರ್ ಜಿಲ್ಲೆಯ ಹುಮ್ನಾಬಾದ್ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 1422

**(ಎಸ್.ಎನ್. ಕೃಷ್ಣಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಆಕುಕ 265 ಹೆಚ್‌ಎಸ್‌ಹೆಚ್ 2010 ಬೆಂಗಳೂರು, ದಿನಾಂಕ : 31–05–2010**

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳನ್ನು 2010–11ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಉಲ್ಲೇಖ :** 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ : ಜೆಆರ್‌ಒ(ಎಂ) 48(ಭಾ)/2009–10 ದಿನಾಂಕ : 25–05–2010.

**2.** ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರುರವರ ಪತ್ರ ಸಂಖ್ಯೆ : ಪಿಜಿಇಟಿ–10/ಕೌನ್ಸಿಲಿಂಗ್/01/2010–11 ದಿನಾಂಕ : 21–05–2010.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಳಕಂಡ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು 2010–11ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿ, ನ್ಯಾಯಾಲಯದ ಮಧ್ಯಂತರ ತೀರ್ಪಿನನ್ವಯ ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಉಲ್ಲೇಖ–2 ರಲ್ಲಿ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಿರುವಂತೆ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಆಯ್ಕೆ ಪಟ್ಟಿಯೊಂದಿಗೆ ಉಲ್ಲೇಖ–1 ರಲ್ಲಿ ಪ್ರಸ್ತಾವನೆಯನ್ನು ಕಳುಹಿಸಿದ್ದಾರೆ. ಈ ಬಗ್ಗೆ ಪರಿಶೀಲಿಸಿ, ಕೂಡಲೇ ಜಾರಿಗೆ ಬರುವಂತೆ ಈ ಕೆಳಕಂಡ ವೈದ್ಯಾಧಿಕಾರಿಗಳನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ವಿಷಯ ಮತ್ತು ಕಾಲೇಜುಗಳಿಗೆ ನಿಯೋಜಿಸಲಾಗಿದೆ.

| ಕ್ರಮ ಸಂಖ್ಯೆ | ವೈದ್ಯಾಧಿಕಾರಿ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ವ್ಯಾಸಂಗದ ವಿಷಯ | ವೈದ್ಯಕೀಯ ಕಾಲೇಜು |
|---|---|---|---|
| 1 | ಡಾ: ಬಿ.ಜಿ. ರಘುನಂದನ್<br>ಜಿಲ್ಲಾ ಯೋಜನಾ ನಿರ್ವಹಣಾಧಿಕಾರಿ,<br>ಬೆಂಗಳೂರು ನಗರ ಜಿಲ್ಲೆ. | ಡಿಸಿಹೆಚ್ | ಬಿಎಂಸಿ, ಬೆಂಗಳೂರು |
| 2 | ಡಾ: ಜವಾಹರ್ ಬಿ.ಕೆ.<br>ಪ್ರಾ.ಆ.ಕೇಂದ್ರ, ಬಾಣಾವಾರ,<br>ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ. | ಎಂಎಸ್(ಜಿಎಸ್) | ಕಸ್ತೂರ್ ಬಾ ಮೆಡಿಕಲ್ ಕಾಲೇಜು, ಮಂಗಳೂರು |
| 3 | ಡಾ: ಮಂಜುನಾಥ ಹೆಚ್.<br>ಪ್ರಾ.ಆ.ಕೇಂದ್ರ, ದೊಡ್ಡಗುಣಿ,<br>ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | ಡಿಪಿಎಂ | ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜು, ಮಂಗಳೂರು |

| | | | |
|---|---|---|---|
| 4 | ಡಾ: ಜೆ.ಸಿ. ನಾಗರಾಜ,<br>ಸಾರ್ವಜನಿಕ ಆಸ್ಪತ್ರೆ, ಚಳ್ಳಕೆರೆ,<br>ಚಿತ್ರದುರ್ಗ ಜಿಲ್ಲೆ. | ಡಿಸಿಹೆಚ್ | ಕಿಮ್ಸ್, ಹುಬ್ಬಳ್ಳಿ |
| 5 | ಡಾ: ಮಲ್ಲಿಕಾರ್ಜುನ ಸಿ.ಟಿ.<br>ಪ್ರಾ.ಆ.ಕೇಂದ್ರ, ಜಿ.ಆರ್.ಹಳ್ಳಿ,<br>ಚಿತ್ರದುರ್ಗ ತಾಲ್ಲೂಕು/ಜಿಲ್ಲೆ. | ಎಂಎಸ್(ಇಎನ್‌ಟಿ) | ವಿಮ್ಸ್, ಬಳ್ಳಾರಿ |

2. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು/ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಸಂಬಂಧಿಸಿದ ಮೇಲಾಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ಹಾಗೂ ಪ್ರಸ್ತುತ ಜಾರಿಯಲ್ಲಿರುವ ನಿಯಮಗಳಂತೆ ಸದರಿ ವೈದ್ಯಾಧಿಕಾರಿಗಳಿಂದ ನಮೂನೆ 19 ಮತ್ತು 19–ಎ ಹಾಗೂ ಪೆನಾಲ್ಟಿ ಬಾಂಡ್ ಪಡೆದು ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳುವುದು.

3. ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಮೇಲ್ಕಂಡ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ವ್ಯಾಸಂಗದ ರಜೆ ಅಥವಾ ಪ್ರತಿನಿಯೋಜನಾ ರಿಯಾಯಿತಿ ಸೌಲಭ್ಯ ಮಂಜೂರಾತಿಗೆ ಸಂಬಂಧಿಸಿದಂತೆ ಸರ್ಕಾರವು ಪ್ರತ್ಯೇಕವಾಗಿ ಪರಿಶೀಲಿಸಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಲಾಗುವುದು. ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಗಳು ವೇತನ/ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

4. 2010–11ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಮೇಲೆ ತಿಳಿಸಿರುವ ಸೇವಾನಿರತ ವೈದ್ಯರು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳದಲ್ಲಿ ಮುಂದುವರಿಯುವುದು ಹಾಗೂ ತದನಂತರ ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು, ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾಗೂ ಸಂಬಂಧಿಸಿದ ಮೇಲಾಧಿಕಾರಿಗಳು ಅದರಂತೆ ಕ್ರಮತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

5. ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಆಇ 693 ವೆಚ್ಚ–5 ಃ 2008 ದಿನಾಂಕ : 31–05–2008 ರಲ್ಲಿ 5 ವರ್ಷಕ್ಕಿಂತ ಕಡಿಮೆ ಸರ್ಕಾರಿ ಸೇವೆ ಸಲ್ಲಿಸಿರುವ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ನಡೆಸುತ್ತಿರುವ ವೈದ್ಯಾಧಿಕಾರಿಗಳಿಂದ ಪರಿಷ್ಕೃತ ಕರಾರು ಬಂಧ ಪತ್ರವನ್ನು ಪಡೆಯುವ ಷರತ್ತಿಗೊಳಪಟ್ಟು ಈ ಆದೇಶವನ್ನು ಹೊರಡಿಸಿದೆ.

6. ಸ್ನಾತಕೋತ್ತರ ವ್ಯಾಸಂಗಕ್ಕೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಸಲ್ಲಿಸಿರುವ ಅರ್ಜಿಯ ಮೇಲಿನ ಅಂತಿಮ ತೀರ್ಮಾನಕ್ಕೆ ಈ ಆದೇಶವು ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 02 ಎಸ್‌ಆರ್‌ಎ 2008 ದಿನಾಂಕ : 05–06–2008 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1436

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಸೇವೆಗಳು–1)

## ಶಿಕ್ಷಣ ಸಚಿವಾಲಯ

**ವಿಷಯ :** ಕೇಂದ್ರ ಪ್ರಾಯೋಜಿತ ಕಾರ್ಯಕ್ರಮವಾದ "ಪ್ರೌಢಶಾಲಾ ವ್ಯಾಸಂಗಕ್ಕಾಗಿ ಬಾಲಕಿಯರಿಗೆ "ಪ್ರೋತ್ಸಾಹ ಧನ" ನೀಡುವ ಬಗ್ಗೆ.

**ಓದಲಾಗಿದೆ :** 1. ಕೇಂದ್ರ ಸರ್ಕಾರದ ಆದೇಶ ಸಂಖ್ಯೆ : ಎಫ್ 7–1/2008–ಎಸ್.ಎಸ್. ದಿನಾಂಕ : 31–03–2009.

**2.** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಯೋ (2) ಕೇ.ಪ್ರಾ.ಕಾ. ಇತರೆ 01/08–09, ದಿನಾಂಕ : 20–02–2009.

**ಪ್ರಸ್ತಾವನೆ:**

1. ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಪ್ರೌಢಶಾಲಾ ವ್ಯಾಸಂಗಕ್ಕಾಗಿ ಬಾಲಕಿಯರಿಗೆ ಪ್ರೋತ್ಸಾಹ ಧನ" ಕಾರ್ಯಕ್ರಮಕ್ಕಾಗಿ ರೂ. 24,35,70,000–00 (ಇಪ್ಪತ್ತನಾಲ್ಕು ಕೋಟಿ ಮೂವತ್ತೈದು ಲಕ್ಷದ ಎಪ್ಪತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ, ಈ ಮೊತ್ತವನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಶಾಖೆಯಲ್ಲಿ ಫಲಾನುಭವಿಗಳ ಪಟ್ಟಿಯೊಂದಿಗೆ ಜಮಾ ಮಾಡುವಂತೆ ನಿರ್ದೇಶನ ನೀಡಿರುತ್ತಾರೆ.

2. ಸದರಿ ಪತ್ರವನ್ನು ಅನುಸರಿಸಿ ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲ್ಕಂಡ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಾಗೂ ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 138 ಎಂಸಿಡಿ 2008, ಬೆಂಗಳೂರು, ದಿನಾಂಕ 24-05-2010.**

**(ಇಡಿ : 59 : ಸ್ಕೀಮರ(ಯುನಿಕ್) 2010, ದಿನಾಂಕ : 24-05-2010)**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಾದ "ಪ್ರೌಢಶಾಲಾ ವ್ಯಾಸಂಗಕ್ಕಾಗಿ ಬಾಲಕಿಯರಿಗೆ ಪ್ರೋತ್ಸಾಹ ಧನ" ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿಯನ್ನು ನೀಡಿದೆ.

**ಷರತ್ತುಗಳು :**

- ಕೇಂದ್ರ ಸರ್ಕಾರದಿಂದ ಬಿಡುಗಡೆ ಮಾಡಿರುವ ಅನುದಾನವಾದ ರೂ. 24,35,70,000-00 (ಇಪ್ಪತ್ತನಾಲ್ಕು ಕೋಟಿ ಮೂವತ್ತೈದು ಲಕ್ಷದ ಎಪ್ಪತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಫಲಾನುಭವಿಗಳ ಪಟ್ಟಿಯೊಂದಿಗೆ ಜಮಾ ಮಾಡತಕ್ಕದ್ದು.
- ಈ ಮೊತ್ತವನ್ನು ಲೆಕ್ಕಶೀರ್ಷಿಕೆ 2202-02-800-9-04-059 (ಯೋಜನೆ) ಅಡಿ ಭರಿಸತಕ್ಕದ್ದು.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ 8ನೇ ತರಗತಿಯವರೆಗೆ ವ್ಯಾಸಂಗ ಮಾಡಿ, ಸರ್ಕಾರಿ, ಖಾಸಗಿ ಅನುದಾನಿತ ಮತ್ತು ಸ್ಥಳೀಯ ಸಂಸ್ಥೆಗಳ ಶಾಲೆಗಳ ಒಂಭತ್ತನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ 2010ರ ಮಾರ್ಚ್ 31 ರಲ್ಲಿದ್ದಂತೆ 16 ವರ್ಷ ವಯಸ್ಸಿಗಿಂತ ಕೆಳಗಿರುವ ಇನ್ನೂ ವಿವಾಹವಾಗದೇ ಇರುವವರು ಇದರ ಫಲಾನುಭವಿಗಳಾಗಿರತಕ್ಕದ್ದು.
- ಎಂಟನೇ ತರಗತಿಯನ್ನು ಪೂರೈಸಿದ ಸರ್ಕಾರಿ, ಖಾಸಗಿ ಅನುದಾನಿತ ಮತ್ತು ಸ್ಥಳೀಯ ಸಂಸ್ಥೆಗಳ ಶಾಲೆಗಳ ಒಂಭತ್ತನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಹೆಣ್ಣು ಮಕ್ಕಳ ಹೆಸರಿನಲ್ಲಿ 3000 ರೂಪಾಯಿಗಳನ್ನು ಠೇವಣಿಯಾಗಿರಿಸತಕ್ಕದ್ದು.
- ಆ ಮಗುವು 18 ವರ್ಷ ಪೂರೈಸಿ ರಾಜ್ಯ ಅಥವಾ ಕೇಂದ್ರ ಸರ್ಕಾರಗಳು ನಡೆಸುವ ಹತ್ತನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣಳಾದಾಗ ಮಾತ್ರ ಈ ಠೇವಣಿ ಮೊತ್ತವನ್ನು ನೀಡತಕ್ಕದ್ದು.

**1.** ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ : F.D. 1829 Exp.- 8/09 ದಿನಾಂಕ : 16-12-2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1437

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ ಶಿಕ್ಷಣ ಇಲಾಖೆ (ಯೋಜನೆ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಆಕುಕ 86 ಹೆಚ್‌ಎಸ್‌ಹೆಚ್ 2009 ಬೆಂಗಳೂರು, ದಿನಾಂಕ : 31-05-2010**

**ವಿಷಯ :** ಡಾ: ಲಕ್ಷ್ಮೀಕಾಂತ್, ವೈದ್ಯಾಧಿಕಾರಿ ಇವರನ್ನು 2009-10ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಉಲ್ಲೇಖ :** 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ : ಜೆಆರ್‌ಒ(ಎಂ) 45(ಭಾ)/2008-09 ದಿನಾಂಕ : 08-04-2009 ಮತ್ತು 03-08-2009.

**2.** ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರುರವರ ಪತ್ರ ಸಂಖ್ಯೆ : ಪಿಜಿಇಟಿ-9/ಕೌನ್ಸಿಲಿಂಗ್/01/2009-10 ದಿನಾಂಕ : 26-06-2009.

**3.** ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 37 ಸೇಇವಿ 2009 ದಿನಾಂಕ : 06-04-2010.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾಃ ಲಕ್ಷ್ಮೀಕಾಂತ್, ವೈದ್ಯಾಧಿಕಾರಿ ಇವರು 2009-10ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿದ್ದು, ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಉಲ್ಲೇಖ-2 ರಲ್ಲಿ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಿರುವಂತೆ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಉಲ್ಲೇಖ-1 ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆದರೆ, ಸದರಿ ವೈದ್ಯರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆದು ವಾಗ್ದಂಡನೆ ವಿಧಿಸಿದ ಪ್ರಯುಕ್ತ ಇವರನ್ನು 2009-10ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ ಸರ್ಕಾರದಲ್ಲಿ ಪರಿಶೀಲಿಸಿದೆ.

ಉಲ್ಲೇಖ (3)ರ ಸುತ್ತೋಲೆಯಲ್ಲಿ ವಾಗ್ದಂಡನೆ ವಿಧಿಸಿದ ತಕ್ಷಣದಿಂದಲೇ ಈ ದಂಡನಾದೇಶವು ಮುಕ್ತಾಯವಾಗುತ್ತದೆ ಹಾಗೂ ಅದನ್ನು ವಿಧಿಸಿದ ದಿನಾಂಕದ ನಂತರ ಜಾರಿಯಲ್ಲಿ ಇರುವುದಿಲ್ಲವೆಂದು ತಿಳಿಸಿದೆ. ಈ ಹಿನ್ನೆಲೆಯಲ್ಲಿ ಡಾಃ ಲಕ್ಷ್ಮೀಕಾಂತ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕಂದಕೂರ, ಯಾದಗಿರಿ ತಾಲ್ಲೂಕು/ಜಿಲ್ಲೆ ಇವರನ್ನು 2010–11ನೇ ಸಾಲಿನಿಂದ ಜಾರಿಗೆ ಬರುವಂತೆ ಎಂ.ಆರ್. ಮೆಡಿಕಲ್ ಕಾಲೇಜು, ಗುಲ್ಬರ್ಗ ಇಲ್ಲಿ ಎಂಡಿ(ಪೆಥಾಲಜಿ) ವಿಷಯದಲ್ಲಿ ಸ್ನಾತಕೋತ್ತರ ವ್ಯಾಸಂಗ ನಡೆಸಲು ಈ ಕೆಳಕಂಡ ಷರತ್ತಿಗೊಳಪಟ್ಟು ನಿಯೋಜಿಸಲಾಗಿದೆ.

2–ಎ. ಸದರಿ ವೈದ್ಯರನ್ನು ಈ ಹಂತದಲ್ಲೂ ವ್ಯಾಸಂಗಕ್ಕೆ ನಿಯೋಜಿಸಲು ವಿಳಂಬವಾಗಿದ್ದರೂ ಸಂಬಂಧಪಟ್ಟ ಕಾಲೇಜು ಈ ವೈದ್ಯರನ್ನು ಸೇರಿಸಿಕೊಳ್ಳಲು ಅನುಮತಿಸಬೇಕು.

2–ಬಿ. ಒಂದು ವೇಳೆ ಸದರಿ ವೈದ್ಯರು ನಿಗದಿತ ಸಮಯದಲ್ಲಿ ಇವರ ವ್ಯಾಸಂಗವನ್ನು ಪೂರ್ಣಗೊಳಿಸದೆ ಅವಧಿ ವಿಸ್ತರಿಸಬೇಕಾದ ಪಕ್ಷದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ ಅಪೆಂಡಿಕ್ಸ್– II ರಲ್ಲಿ ತಿಳಿಸಿರುವ ಹಾಗೆ ಇವರ ಲೆಕ್ಕದಲ್ಲಿರುವ ರಜೆ/ಅಸಾಧಾರಣ ರಜೆ ಮಂಜೂರು ಮಾಡಲು ಅಭ್ಯರ್ಥಿಯು ಒಪ್ಪಿ ಕರಾರು ಪತ್ರವನ್ನು ಸಲ್ಲಿಸತಕ್ಕದ್ದು.

3. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ಹಾಗೂ ಪ್ರಸ್ತುತ ಜಾರಿಯಲ್ಲಿರುವ ನಿಯಮಗಳಂತೆ ಸದರಿ ವೈದ್ಯರಿಂದ ನಮೂನೆ 19 ಮತ್ತು 19–ಎ ಹಾಗೂ ಪೆನಾಲ್ಟಿ ಬಾಂಡ್ ಪಡೆದು ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳುವುದು.

4. ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ವೈದ್ಯಾಧಿಕಾರಿಯು ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ವ್ಯಾಸಂಗದ ರಜೆ ಅಥವಾ ಪ್ರತಿನಿಯೋಜನಾ ರಿಯಾಯಿತಿ ಸೌಲಭ್ಯ ಮಂಜೂರಾತಿಗೆ ಸಂಬಂಧಿಸಿದಂತೆ ಸರ್ಕಾರವು ಪ್ರತ್ಯೇಕವಾಗಿ ಪರಿಶೀಲಿಸಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಲಾಗುವುದು. ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಯು ವೇತನ/ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

5. ಸ್ನಾತಕೋತ್ತರ ವ್ಯಾಸಂಗಕ್ಕೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಅರ್ಜಿಯ ಮೇಲಿನ ಅಂತಿಮ ತೀರ್ಮಾನಕ್ಕೆ ಈ ಆದೇಶವು ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 02 ಎಸ್ಆರ್ಎ 2008 ದಿನಾಂಕ : 05—6–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1438

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಸೇವೆಗಳು–1)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2009–10ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ 2010–11ನೇ ಸಾಲಿನಲ್ಲಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–18014 : 03 : 2009–10–ಡಿಆರ್‌ಡಿಎ (ಎಸ್ಆರ್ ನಂ. 10) ದಿನಾಂಕ : 13–04–09, (ಎಸ್ಆರ್ ನಂ. 32) ದಿನಾಂಕ : 19–06–09, (ಎಸ್ಆರ್ ನಂ. 36) ದಿನಾಂಕ : 03–07–09 ಮತ್ತು (ಎಸ್ಎಲ್ನಂ.45) ದಿನಾಂಕ : 10–08–2009.
2. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2009, ಬೆಂಗಳೂರು ದಿನಾಂಕ : 20–05–09, 15–07–09, 04–08–09, 05–10–09, 23–12–09, ಮತ್ತು 28–01–10.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014 : 10 : 2009–10/ಡಿಆರ್‌ಡಿಎ (ಎಸ್ಎಲ್ನಂ. 72) ದಿನಾಂಕ : 17–09–09, (ಎಸ್ಎಲ್ನಂ. 78) ದಿನಾಂಕ 30–09–09, (ಎಸ್ಎಲ್ ನಂ. 100) ದಿನಾಂಕ 04–11–09, (ಎಸ್ಎಲ್ ನಂ. 122) ದಿನಾಂಕ 19–11–09, (ಎಸ್ಎಲ್ ನಂ. 133) ದಿನಾಂಕ 04–12–09 (ಎಸ್ಎಲ್ ನಂ. 195) ದಿನಾಂಕ 29–03–10 ಮತ್ತು (ಎಸ್ಎಲ್ ನಂ. 220) ದಿನಾಂಕ 31–03–10.
4. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 8 ಎಸ್‌ಜೆವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ : 29–03–2010.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರ ಡಿಆರ್‌ಡಿಎ ಆಡಳಿತ ಯೋಜನೆಗೆ ಓದಲಾಗಿದೆ (1) ಮತ್ತು (2)ರಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಒಂದನೇ ಕಂತಿನ ಅನುದಾನ ರೂ. 5,53,12,000 ಹಾಗೂ ರೂ. 1,84,36,000ಗಳನ್ನು ಅನುಕ್ರಮವಾಗಿ ಬಿಡುಗಡೆ ಮಾಡಲಾಗಿದೆ. ಕೇಂದ್ರ ಸರ್ಕಾರ ಓದಲಾಗಿದೆ (3)ರ ದಿನಾಂಕ 30–09–09, 04–11–09, 19–11–09 ಮತ್ತು 04–12–09 ರ ಪತ್ರಗಳಲ್ಲಿ ರಾಜ್ಯದ 9 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನ ರೂ. 2,45,07,000 ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರ ಎರಡನೇ ಕಂತಿನ ಅನುದಾನ ರೂ. 81,69,000 ಗಳನ್ನು ಓದಲಾಗಿದೆ (2)ರ ಆದೇಶಗಳಲ್ಲಿ ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರವು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತ್ ಹೊರತುಪಡಿಸಿ 19 ಜಿಲ್ಲಾ ಪಂಚಾಯತಿಗಳ ಎರಡನೇ ಕಂತಿನ ಅನುದಾನ ಕೋರಿ ಪ್ರಸ್ತಾವನೆಯನ್ನು ಕಳುಹಿಸಲಾಗಿತ್ತು. ಆದರೆ, ಕೇಂದ್ರ ಸರ್ಕಾರ ವರ್ಷಾಂತ್ಯದವರೆಗೂ ಈ 19 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡದ ಕಾರಣ ವೇತನ ಪಾವತಿಸಲು ತೊಂದರೆಯಾಗಿದೆಯೆಂದು ಜಿಲ್ಲಾ ಪಂಚಾಯತಿಗಳು ತಿಳಿಸಿದ್ದವು. ಆದುದರಿಂದ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ್ದ ಒಂದನೇ ಕಂತಿನ ಅನುದಾನದಷ್ಟೇ ಎರಡನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಓದಲಾಗಿದೆ (4) ರ ಆದೇಶದಲ್ಲಿ ರೂ. 1,20,01,000ಗಳನ್ನು ಬಿಡುಗಡೆ ಮಾಡಲಾಯಿತು.

ಏತನ್ಮಧ್ಯೆ, ಕೇಂದ್ರ ಸರ್ಕಾರ ದಿನಾಂಕ 29–03–2010ರ ಪತ್ರದಲ್ಲಿ ರಾಜ್ಯ 19 ಜಿಲ್ಲಾ ಪಂಚಾಯತಿಗಳಾದ ಬಾಗಲಕೋಟೆ, ಬೆಂಗಳೂರು ನಗರ, ಬೀದರ್, ಬಿಜಾಪುರ, ಚಾಮರಾಜನಗರ, ಚಿತ್ರದುರ್ಗ, ದಾವಣಗೆರೆ, ಗದಗ್, ಗುಲ್ಬರ್ಗಾ, ಹಾಸನ, ಹಾವೇರಿ, ಕೊಡಗು, ಕೋಲಾರ, ಕೊಪ್ಪಳ, ಮಂಡ್ಯ, ರಾಯಚೂರು, ಉತ್ತರ ಕನ್ನಡ, ರಾಮನಗರ ಮತ್ತು ಮೈಸೂರು ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನ ರೂ. 4,26,19,000 ಗಳನ್ನು ಹಾಗೂ ದಿನಾಂಕ : 31–03–2010ರ ಪತ್ರದಲ್ಲಿ ಚಿಕ್ಕಬಳ್ಳಾಪುರ ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಹೆಚ್ಚುವರಿ ಅನುದಾನ ರೂ. 3,56,53,000 ಗಳನ್ನು ಬಿಡುಗಡೆ ಮಾಡಿದೆ. ಈ ಅನುದಾನವು ವರ್ಷಾಂತ್ಯದಲ್ಲಿ ಬಿಡುಗಡೆಯಾದ ಕಾರಣ ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ. 1,47,13,000 ಗಳನ್ನು ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ. ಮಾರ್ಗಸೂಚಿಯನ್ವಯ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ರಾಜ್ಯ ಸರ್ಕಾರ ಅನುದಾನವನ್ನು ಬಿಡುಗಡೆ ಮಾಡಲೇಬೇಕು. ಇಲ್ಲವಾದಲ್ಲಿ ಕೇಂದ್ರ ಸರ್ಕಾರ 2010–11 ನೇ ಸಾಲಿನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವಾಗ ಈ ಕಾರಣಕ್ಕಾಗಿ ಅನುದಾನವನ್ನು ಕಡಿತಗೊಳಿಸುವುದು. ಆದಕಾರಣ, 2010–11 ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಡಿಆರ್‌ಡಿಎ ಆಡಳಿತ ಯೋಜನೆಯಡಿ ನಿಗದಿಪಡಿಸಿದ ಅನುದಾನದಿಂದ ರೂ. 1,47,13,000 ಭರಿಸಿ ಬಿಡುಗಡೆ ಮಾಡಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ 25–05–2010.**

**ರಾಜ್ಯ ಸರ್ಕಾರವು 2010–11ನೇ ಸಾಲಿನ ಆಯವ್ಯಯದಲ್ಲಿ ಡಿಆರ್‌ಡಿಎ ಆಡಳಿತ ಯೋಜನೆಗೆ ಒದಗಿಸಿದ ಅನುದಾನದಿಂದ ಕೇಂದ್ರ ಸರ್ಕಾರ 2009–10ನೇ ಸಾಲಿನಲ್ಲಿ 28 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆಗೊಳಿಸಿದ ಅನುದಾನಕ್ಕನುಗುಣವಾಗಿ ಅನುಬಂಧದಲ್ಲಿ ತೋರಿಸಿರುವಂತೆ ರೂ. 1,47,13,000ಗಳನ್ನು (ರೂಪಾಯಿ ಒಂದು ಕೋಟಿ ನಲವತ್ತೇಳು ಲಕ್ಷ ಹದಿಮೂರು ಸಾವಿರ ಮಾತ್ರ) ಭರಿಸಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.**

**ಷರತ್ತುಗಳು :**

***ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜನಾಧಿಕಾರಿಗಳು ಅನುಮತಿ ನೀಡತಕ್ಕದ್ದು.***

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75 : 25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196 ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6 ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2010–2011 (2515–00–196–6–06)"ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತಿ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ, ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ , ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ : ಗ್ರಾಅಪ 128 ಪಿಬಿಎಸ್ 2010 ದಿನಾಂಕ 21-05-2010ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಿ.ಕೆ.ರಂಗಸ್ವಾಮಿ**
ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಪ.ನಿ.
ಸರ್ಕಾರದ ಅಪರ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

*ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ : 25-05-2010ಕ್ಕೆ*

*ಅನುಬಂಧ*

(ರೂ.ಗಳಲ್ಲಿ)

| ಕ್ರ ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿಲ್ಲಾ ಕೋಡ್ | ಡಿ.ಡಿ.ಓ ಕೋಡ್ | 2009-10ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಟ್ಟು ಅನುದಾನ | ಕಲಂ(5) ಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ಬಿಡುಗಡೆ ಮಾಡಬೇಕಾದ ಅನುದಾನ | 2009-10ನೇ ಸಾಲಿನಲ್ಲಿ ರಾಜ್ಯ ಸರ್ಕಾರ ಜಿಲ್ಲಾ ಪಂಚಾಯತಿಗಳಿಗೆ ಈಗಾಗಲೇ ಬಿಡುಗಡೆ ಮಾಡಿದ ಅನುದಾನ | 2009-10ನೇ ಸಾಲಿನ ಉಳಿಕೆ ರಾಜ್ಯದ ಪಾಲಿನ ಅನುದಾನವನ್ನು 2010-11ನೇ ಸಾಲಿನ ಆಯವ್ಯಯದಲ್ಲಿ ಭರಿಸಿ ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬಾಗಲಕೋಟೆ | 461 | 2900ZZ0001 | 60,04,000 | 20,01,000 | 13,94,000 | 6,07,000 |
| 2 | ಬೆಂಗಳೂರು ನಗರ | 401 | 0100ZZ8001 | 53,57,000 | 17,86,000 | 11,26,000 | 6,60,000 |
| 3 | ಬೆಂಗಳೂರು (ಗ್ರಾ) | 402 | 0300ZZ8001 | 56,78,000 | 18,93,000 | 14,60,000 | 4,33,000 |
| 4 | ಬೆಳಗಾಂ | 413 | 2200ZZ0002 | 70,97,000 | 23,66,000 | 18,25,000 | 5,41,000 |
| 5 | ಬಳ್ಳಾರಿ | 418 | 3400ZZ0001 | 65,24,000 | 21,75,000 | 16,77,000 | 4,98,000 |
| 6 | ಬೀದರ್ | 419 | 3800ZZ5701 | 51,85,000 | 17,28,000 | 11,26,000 | 6,02,000 |
| 7 | ಬಿಜಾಪುರ | 414 | 2800ZZ9152 | 72,41,000 | 24,14,000 | 11,26,000 | 12,88,000 |
| 8 | ಚಾಮರಾಜನಗರ | 456 | 1000ZZ0001 | 31,50,000 | 10,50,000 | 11,26,000 | 0 |
| 9 | ಚಿಕ್ಕಮಗಳೂರು | 408 | 1800ZZ0017 | 52,90,000 | 17,63,000 | 13,60,000 | 4,03,000 |
| 10 | ಚಿತ್ರದುರ್ಗ | 403 | 1600ZZ0001 | 64,98,000 | 21,66,000 | 13,94,000 | 7,72,000 |
| 11 | ದಾವಣಗೆರೆ | 451 | 1700ZZ0002 | 65,62,000 | 21,87,000 | 13,94,000 | 7,93,000 |
| 12 | ದಕ್ಷಿಣ ಕನ್ನಡ | 409 | 1900ZZ0047 | 52,91,000 | 17,64,000 | 13,61,000 | 4,03,000 |
| 13 | ಧಾರವಾಡ | 415 | 2500ZZ8798 | 54,87,000 | 18,29,000 | 14,11,000 | 4,18,000 |
| 14 | ಗದಗ್ | 462 | 2600ZZ0001 | 53,60,000 | 17,87,000 | 11,26,000 | 6,61,000 |
| 15 | ಗುಲ್ಬರ್ಗಾ | 417 | 3200ZZ0003 | 77,35,000 | 25,78,000 | 13,94,000 | 11,84,000 |
| 16 | ಹಾಸನ | 410 | 1300ZZ0003 | 52,21,000 | 17,40,000 | 13,94,000 | 3,46,000 |
| 17 | ಹಾವೇರಿ | 463 | 2700ZZ0001 | 43,48,000 | 14,49,000 | 13,94,000 | 55,000 |
| 18 | ಕೊಡಗು | 411 | 1200ZZ0001 | 29,30,000 | 09,77,000 | 11,26,000 | 0 |

| | | | | | | | |
|---|---|---|---|---|---|---|---|
| 19 | ಕೋಲಾರ | 404 | 0700ZZ8002 | 56,74,000 | 18,91,000 | 11,26,000 | 7,65,000 |
| 20 | ಕೊಪ್ಪಳ | 466 | 1500ZZ0010 | 50,07,000 | 16,69,000 | 11,26,000 | 5,43,000 |
| 21 | ಮಂಡ್ಯ | 412 | 1100ZZ0001 | 72,29,000 | 24,10,000 | 13,94,000 | 10,16,000 |
| 22 | ಮೈಸೂರು | 407 | 0900ZZ0001 | 59,29,000 | 19,76,000 | 13,94,000 | 5,82,000 |
| 23 | ರಾಯಚೂರು | 420 | 3600ZZ0001 | 46,20,000 | 15,40,000 | 11,26,000 | 4,14,000 |
| 24 | ರಾಮನಗರ | 452 | 0400ZZ0001 | 21,88,000 | 7,29,000 | 11,25,000 | 0 |
| 25 | ಶಿವಮೊಗ್ಗ | 405 | 1400ZZ0002 | 66,82,000 | 22,27,000 | 17,18,000 | 5,09,000 |
| 26 | ತುಮಕೂರು | 406 | 0800ZZ0001 | 60,20,000 | 20,07,000 | 15,48,000 | 4,59,000 |
| 27 | ಉಡುಪಿ | 457 | 2000ZZ0001 | 60,13,000 | 20,04,000 | 15,46,000 | 4,58,000 |
| 28 | ಉತ್ತರ ಕನ್ನಡ | 416 | 3000ZZ0080 | 56,79,000 | 18,93,000 | 15,90,000 | 3,03,000 |
| | | | | 15,59,99,000 | 5,20,00,000 | 3,79,07,000 | 1,47,13,000 |

ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಯು 2ನೇ ಕಂತಿನ ಅನುದಾನ ಬಿಡುಗಡೆಗಾಗಿ ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸದಿದ್ದ ಕಾರಣ ಕೇಂದ್ರ ಸರ್ಕಾರವು 2ನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಿರುವುದಿಲ್ಲ. ಆದಕಾರಣ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ.

**ಡಿ.ಕೆ.ರಂಗಸ್ವಾಮಿ**
ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಪ.ನಿ.
ಸರ್ಕಾರದ ಅಪರ ಕಾರ್ಯದರ್ಶಿ
ಪಿ.ಆರ್. 1439 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಎ. ಮರಿಗೌಡ, ಕೆಎಎಸ್ (ಕಿರಿಯ ಶ್ರೇಣಿ) ಇವರ ಅಮಾನತ್ತನ್ನು ರದ್ದುಗೊಳಿಸಿ ಸೇವೆಗೆ ತೆಗೆದುಕೊಳ್ಳುವ ಬಗ್ಗೆ

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09, ಬೆಂಗಳೂರು, ದಿನಾಂಕ: 1ನೇ ಜೂನ್, 2010**

ಶ್ರೀ ಎ. ಮರಿಗೌಡ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಇವರ ವಿರುದ್ಧ ಲಂಚ ನಿರೋಧಕ ಕಾಯ್ದೆ, 1988ರ ಕಲಂ 7, 13(1)(d) ಜೊತೆಗೆ 13(2)ರ ಪ್ರಕಾರ ಕರ್ನಾಟಕ ಲೋಕಾಯುಕ್ತ ಪೊಲೀಸರು ಠಾಣೆ, ರಾಮನಗರ ಇಲ್ಲಿ ಮೊಕದ್ದಮೆ ಸಂಖ್ಯೆ : 03/2009 ರಲ್ಲಿ ದಾಖಲಾದ ಪ್ರಕರಣ, ಸಂಬಂಧವಾಗಿ, ದಿನಾಂಕ 03-06-09 ರಂದು ಶ್ರೀ ಮರೀಗೌಡ ರವರು ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಕ್ಕಿಬಿದ್ದ ಕಾರಣ, ಇವರನ್ನು ದಿನಾಂಕ 24-07-09ರ ಆದೇಶ ಸಂಖ್ಯೆ ಸಿಆಸುಇ 017 ಕೆಇವಿ 09 ರಲ್ಲಿ ಶಿಸ್ತು ಕ್ರಮವನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಇವರ ಅಮಾನತ್ತನ್ನು ತೆರೆವುಗೊಳಿಸಿ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ ಸರ್ಕಾರವು ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಇವರ ವಿರುದ್ಧ ಶಿಸ್ತು ಕ್ರಮವನ್ನು ಬಾಕಿ ಇರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತನ್ನು ತೆರೆವುಗೊಳಿಸಿ ಇವರನ್ನು ಸೇವೆಗೆ ತೆಗೆದುಕೊಳ್ಳಲಾಗಿದೆ. ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಇವರನ್ನು ವಿಶೇಷ ಭೂಸ್ವಾಧೀನಾಧಿಕಾರಿ, ಮಂಗಳೂರು ಮಹಾನಗರ ಪಾಲಿಕೆ, ಮಂಗಳೂರು ಇಲ್ಲಿನ ಖಾಲಿ ಹುದ್ದೆಗೆ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್. ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 1441 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2)

## ಒಳಾಡಳಿತ ಸಚಿವಾಲಯ

**ವಿಷಯ** : ಬೆಳಗಾವಿ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸುವ ಬಗ್ಗೆ

**ಓದಲಾಗಿದೆ** : ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರ ಪತ್ರ ಸಂಖ್ಯೆ : ಜೆ2/ಸಿಆರ್-63/2004, ದಿನಾಂಕ 14-10-2008 ಮತ್ತು 21-02-2009.

1974ನೇ ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 192ರ ನಿಯಮದಲ್ಲಿ ಪ್ರತಿ ಕೇಂದ್ರ ಕಾರಾಗೃಹಕ್ಕಾಗಿ ಸಲಹಾ ಮಂಡಳಿಯನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವಿರುತ್ತದೆ. ದೀರ್ಘಾವಧಿ ಶಿಕ್ಷೆಗೊಳಪಟ್ಟ ಅಪರಾಧಿಗಳನ್ನು ವಿಮರ್ಶಿಸುವುದು ಈ ಮಂಡಳಿಯ ಉದ್ದೇಶವಾಗಿರುತ್ತದೆ.

ಈ ಸಲಹಾ ಮಂಡಳಿಯು ಈ ಕೆಳಕಂಡವರನ್ನು ಒಳಗೊಂಡಿರತಕ್ಕದ್ದಾಗಿರುತ್ತದೆ :-

**ಆಯಾ ಜಿಲ್ಲೆಯ**

| | |
|---|---|
| 1) ಜಿಲ್ಲಾಧಿಕಾರಿ ಮತ್ತು ಜಿಲ್ಲಾ ದಂಡಾಧಿಕಾರಿಗಳು | ಅಧ್ಯಕ್ಷರು |
| 2) ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು | ಸದಸ್ಯರು |
| 3) ಪೊಲೀಸ್ ಅಧೀಕ್ಷಕರು | ಸದಸ್ಯರು |
| 4) ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 5) ಮೂರು ಜನ ಸ್ಥಳೀಯ ಅಧಿಕಾರೇತರರು | ಸದಸ್ಯರು |
| 6) ಕೇಂದ್ರ ಕಾರಾಗೃಹದ ಅಧೀಕ್ಷಕರು | ಕಾರ್ಯದರ್ಶಿ |

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ, ಮೇಲೆ ಹೇಳಲಾದ ನಿಯಮವನ್ನು ಪ್ರಸ್ತಾಪಿಸಿ, 3 ಜನ ಸ್ಥಳೀಯ ಅಧಿಕಾರೇತರರ ಸದಸ್ಯರನ್ನು ತಿಳಿಸುತ್ತಾ, ಬೆಳಗಾವಿ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸುವಂತೆ ಕೋರಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 259 ಪಿಆರ್‌ಎ 2008, ಬೆಂಗಳೂರು, ದಿನಾಂಕ: 26ನೇ ಮೇ, 2010**

ಬೆಳಗಾವಿ ಕೇಂದ್ರ ಕಾರಾಗೃಹದಲ್ಲಿ ದೀರ್ಘಾವಧಿ ಶಿಕ್ಷೆ ಅನುಭವಿಸುತ್ತಿರುವ ಅಪರಾಧಿಗಳನ್ನು ವಿಮರ್ಶಿಸುವ ಸಲುವಾಗಿ, 1974ನೇ ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 192ನೇ ನಿಯಮದ ಅನ್ವಯ ಸರ್ಕಾರವು ಬೆಳಗಾವಿ ಕೇಂದ್ರ ಕಾರಾಗೃಹಕ್ಕೆ ಈ ಕೆಳಕಂಡಂತೆ ಸಲಹಾ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿದೆ :-

| | |
|---|---|
| 1) ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2) ಬೆಳಗಾವಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು | ಸದಸ್ಯರು |
| 3) ಬೆಳಗಾವಿ ಜಿಲ್ಲೆಯ ಪೊಲೀಸ್ ಅಧೀಕ್ಷಕರು | ಸದಸ್ಯರು |
| 4) ಬೆಳಗಾವಿ ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 5) ಶ್ರೀ ಸುಧಾಕರ ಕೆ. ಶೆಟ್ಟಿ, ಬುಡಾ ಸೆಕ್ಟರ್, ನಂ. 51, ಲಕ್ಷ್ಮೀಟೇಕ, ಬೆಳಗಾವಿ | ಸದಸ್ಯರು |
| 6) ಶ್ರೀಮತಿ ಲಕ್ಷ್ಮೀಶೆಟ್ಟಿ, ಸೈಂಟ್‌ಮೇರೀಸ್ ಸ್ಕೂಲ್ ಹತ್ತಿರ, ಅನಗೋಳ, ಬೆಳಗಾವಿ | ಸದಸ್ಯರು |
| 7) ಶ್ರೀಮತಿ ಪಾರ್ವತಿ ಲಮಾಣಿ, ಬಂಜಾರ ಲಂಬಾಣಿ ಸೇವಾ ಸಂಘ ಆಶ್ರಯ ಕಾಲೋನಿ, ಬೆಳಗಾವಿ. | ಸದಸ್ಯರು |
| 8) ಬೆಳಗಾವಿ ಕೇಂದ್ರ ಕಾರಾಗೃಹದ ಅಧೀಕ್ಷಕರು | ಕಾರ್ಯದರ್ಶಿ |

ಅಧಿಕಾರೇತರ ಸದಸ್ಯರ* ಅವಧಿಯು ಮೂರು ವರ್ಷಗಳಿಗೆ ಅಥವಾ ತತ್ಸಂಬಂಧ ಸರ್ಕಾರವು ಮುಂದೆ ನೀಡಬಹುದಾದ ಆದೇಶದವರೆಗೆ ಇವರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇರುತ್ತದೆ.

ಈ ಸಲಹಾ ಮಂಡಳಿಯು 1974ನೇ ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 193ರ ನಿಯಮದಲ್ಲಿ ತಿಳಿಸಿರುವಂತೆ ತನ್ನ ಕಾರ್ಯವನ್ನು ನಿರ್ವಹಿಸಿತಕ್ಕದ್ದಾಗಿರುತ್ತದೆ.

ಈ ಸಲಹಾ ಮಂಡಳಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ 3–2–2001ರಲ್ಲಿ ಹೊರಡಿಸಿದ ನಿಯಮಗಳನ್ವಯ ಹಾಗೂ ಸದರಿ ನಿಯಮಗಳಲ್ಲಿ ತಿಳಿಸಲಾಗಿರುವ ಷರತ್ತುಗಳಿಗೆ ಬದ್ಧವಾಗಿ ಭತ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ. ಕೃಷ್ಣಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1442 ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## INFORMATION TECHNOLOGY, BIO TECHNOLOGY AND SCIENCE AND TECHNOLOGY SECRETARIAT

**Sub :- Constitution of Selection Committee for B.T. Finishing Schools**

**Read :-** 1] 30th meeting of Vision Group on Biotechnology held on 2006-2009.

2] The millennium Biotech Policy-II vide Govt. Order No. ITD 58 MDA 2008, dated 18-07-2009.

3] 31st Meeting of Vision Group on Biotechnology held on 19-1-2010.

4] 32nd Meeting of Vision Group on Biotechnology held on 26-4-2010.

***

**Preamble:**

The Vision Group on Biotechnology headed by Dr. Kiran Mazumdar Shaw, CMD, BIOCON, in the 30th meeting of Vision Group on Biotechnology held on 20-6-2009, recommended setting up of B.T. Finishing Schools, to fill the gap between the academic education of Graduates and Post-Graduates on the Industry requirements. The objective of B.T. Finishing Schools is to make the students industry-ready, to develop skills and techniques for problem solving. The B.T. Finishing Schools should be accredited to the recognized universities, Association of Biotech Led Enterprises [ABLE] will help in the evaluation and assessment of the Finishing Schools, design the course content and industry will provide faculty support. The Vision Group recommended to the State Government to provide financial support upto 25% of the cost of equipments/instruments required for the B.T. Finishing Schools subject to maximum of Rs. 1.00 crore per B.T. Finishing School. The Vision Group recommended setting up of 10 Finishing Schools.

State Government revised the biotechnology Policy and issued Govt. Order No. ITD 58 MDA 2008, dated 18-07-2009, announcing the Millennium Biotech Policy II and Para 14.2 of the Policy document provided for setting up of 10 B.T. Finishing Schools, to begin with , to be selected by ABLE and Vision Group on Bio Technology. The Finishing Schools to have ABLE recognition and accreditation from a recognized university, State Government to provide financial support up to 25% of the cost of equipments/instruments required for the B.T. Finishing Schools subject to maximum of Rs. 1.00 crore per B.T. Finishing School towards setting up of necessary Laboratory instruments and other technology related gadgets and equipment required for training of students

In the 31st meeting of Vision Group on Biotechnology held on 19-1-2010, under the chairmanship of Dr. Kiran Mazumdar Shaw, it was decided to set up a Committee under Prof. Padmanabhan, member Vision Group, to suggest eligibility criteria, course content, duration, selection procedure, university affiliation, constitution of selection committee etc. It was also decided to complete the selection process by 2010 May end and announce selected B.T. Finishing Schools at Bangalore-India Bio event on 2nd June 2010 and Global Investors Meet on 3rd and 4th June, 2010.

In the 32nd meeting of Vision Group on Biotechnology held on 26-4-2010, the guidelines for setting up of ..Finishing Schools recommended by Prof. Padmanabhan Committee were considered and with few modifications, guidelines were adopted. The Vision Group suggested that the State Government go ahead and call for Expression of Interest. Accordingly, Expression of Interest was called for and published in news papers on May 1st 2010.

A Selection Committee is required to be constituted for selecting the B. T. Finishing Schools. Hence the order.

**Government Order No. ITD 01 MDA 2010, Bangalore, dated : 27-05-2010**

In the circumstances explained in the preamble, Government is pleased to constitute the Selection Committee consisting of the following for selection of B.T. Finishing Schools to be provided with financial support up to 25% of the cost of equipment/instruments required for the B.T. Finishing Schools subject to maxim of Rs. 1.00 crore per B.T. Finishing School :-

| | | | | |
|---|---|---|---|---|
| 1. | Prof. Padmanabhan<br>Professor Emeritus IISC and<br>Member, Vision Group on Biotechnology | … | … | Chairman |
| 2. | Dr. H. Sharat Chandra<br>Professor Emeritus IISC<br>Director, Centre for Human Genetics and<br>Member, Vision Group on Biotechnology | … | … | Member |
| 3. | Prof. N. Yathindra<br>Director, IBAB | … | … | Member |
| 4. | Dr. K. K. Narayanan<br>Managing Director, Metahelix Life Sciences P. Ltd., &<br>Member, Vision Group on Biotechnology | … | … | Member |
| 5. | Sri Jeetendra Singh<br>Officer on Special Duty<br>Department of IT, BT and S & T<br>[Representative of the Principal Secretary,<br>IT, BT and S & T | … | … | Member |
| 6. | Sri G. C. Rajshekhar<br>General Manager, KBITS | … | … | Member<br>Secretary |

The Selection Committee shall scrutinize the applications; satisfy itself about the course content, infrastructure required for teaching and training, recognition and accreditation, eligibility criteria, faculty availability and all such details before recommending selection of an institution.

The Selection Committee shall submit its recommendations to the State Government for issue of appropriate Government orders for sanction and setting up of B. T. Finishing Schools in the State.

By Order and in the name of the Governor of Karnataka
(**M. V. Krishnamurthy)**
under Secretary to Government
Department of Information Technology,
Bio Technology and Science & Technology

P.R. 1443

**ಕಾರ್ಮಿಕ ಸಚಿವಾಲಯ**

ತಿದ್ದುಪಡಿ

ಸಂಖ್ಯೆ : ಕಾಇ 79 ಎಲ್‌ಡಬ್ಲೂಎ 2009, ಬೆಂಗಳೂರು, ದಿನಾಂಕ 24ನೇ ಮೇ, 2010

ಸರ್ಕಾರದ ಅಧಿಸೂಚನೆ ಸಂಖ್ಯೆ : ಕಾಇ 119 ಎಲ್‌ಡಬ್ಲ್ಯೂಎ 2008, ದಿನಾಂಕ 16-10-2008ರ ಕ್ರ.ಸಂ. 14ರಲ್ಲಿ "ಉಪ ಕಾರ್ಮಿಕ ಆಯುಕ್ತರು [ಪ್ರಚಾರ ಮತ್ತು ಅಂಕಿ ಅಂಶ], ಕಾರ್ಮಿಕ ಆಯುಕ್ತರ ಕಛೇರಿ, ಕಾರ್ಮಿಕ ಭವನ, ಬೆಂಗಳೂರು-29" ಎಂಬ ಪದಗಳಿಗೆ ಬದಲಾಗಿ "ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಯದರ್ಶಿ, ಕನಿಷ್ಠ ವೇತನ ಸಲಹಾ ಮಂಡಳಿ, ಕಾರ್ಮಿಕ ಆಯುಕ್ತರ ಕಛೇರಿ, ಕಾರ್ಮಿಕ ಭವನ, ಬೆಂಗಳೂರು-29" ಎಂಬುದಾಗಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎನ್. ಆರ್. ಪ್ರಭು)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಪಿ.ಆರ್. 1444

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ** : ಬೆಳಗಾಂ ಜಿಲ್ಲೆ ಬೈಲಹೊಂಗಲ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ** :
1) ಮಾನ್ಯ ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ ವ್ಯವಹಾರ ಹಾಗೂ ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರು ಇವರ ಟಿಪ್ಪಣಿ ಸಂಖ್ಯೆ 4118/09, ಸಕಾಸಂಸ, ದಿನಾಂಕ 24–07–2009.
2) ಸರ್ಕಾರದ ಪತ್ರ ಸಂಖ್ಯೆ ಲಾ 114 ಎಲ್‌ಸಿಎಲ್ 2009, ದಿನಾಂಕ 21–08–2009 ಹಾಗೂ 08–03–2010.
3) ಜಿಲ್ಲಾಧಿಕಾರಿ ಬೆಳಗಾವಿ ಇವರ ಪತ್ರ ಸಂಖ್ಯೆ ಕಂಶಾ/ಸಿಬ್ಬಂದಿ 1/ವಿವ–75/2009–10 ದಿನಾಂಕ 27–03–2010.
4) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾವಿ ಇವರ ಪತ್ರ ಸಂಖ್ಯೆ ಆರ್. ಕೆ. 4587/2010, ದಿನಾಂಕ 7/12–04–10.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 24–07–2009ರ ಟಿಪ್ಪಣಿಯನ್ವಯ ಬೈಲಹೊಂಗಲ ತಾಲ್ಲೂಕಿನ ಸ್ಥಳೀಯ ಶಾಸಕರು ಬೈಲಹೊಂಗಲ ತಾಲ್ಲೂಕಿಗೆ ಮತ್ತೊಂದು ನೋಟರಿಯ ಅವಶ್ಯಕತೆಯಿದೆ ಎಂದು ತಿಳಿಸಿರುವುದರ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ 21–08–09ರ ಹಾಗೂ 08–03–2010ರ ಪತ್ರಗಳಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬೆಳಗಾಂ ಹಾಗೂ ಜಿಲ್ಲಾಧಿಕಾರಿ ಬೆಳಗಾಂ ಇವರುಗಳನ್ನು ಕೋರಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ದಿನಾಂಕ 27–03–10ರ ಪತ್ರದಲ್ಲಿ ಜಿಲ್ಲಾಧಿಕಾರಿ ಬೆಳಗಾಂ ಇವರು ಬೈಲಹೊಂಗಲ ಪಟ್ಟಣದಲ್ಲಿ 3 ಜನ ರಾಜ್ಯ ಸರ್ಕಾರ ಹಾಗೂ 2 ಕೇಂದ್ರ ಸರ್ಕಾರದಿಂದ ನೇಮಕಗೊಂಡ ನೋಟರಿಗಳು ಸಾರ್ವಜನಿಕರಿಗೆ ಹಾಗೂ ವಕೀಲರಿಗೆ ಸಮರ್ಪಕವಾಗಿ ಕೆಲಸ ನಿರ್ವಹಿಸಿರುತ್ತಿರುತ್ತಾರೆ. ಹೆಚ್ಚುವರಿ ನೋಟರಿ ಅವಶ್ಯಕತೆ ಇರುವುದಿಲ್ಲ ಮತ್ತು ಈಗ ಕೆಲಸ ನಿರ್ವಹಿಸುತ್ತಿರುವ ನೋಟರಿಗಳಿಗೆ ಯಾವುದೇ ರೀತಿಯ ಹೆಚ್ಚುವರಿ ಕೆಲಸದ ಒತ್ತಡ ಕಂಡು ಬರುತ್ತಿಲ್ಲ. ಆದರೂ ಬೈಲಹೊಂಗಲ ತಾಲ್ಲೂಕಿಗೆ ಇನ್ನೊಂದು ನೋಟರಿ ಹುದ್ದೆ ಸೃಜಿಸಿದಲ್ಲಿ ಸಾರ್ವಜನಿಕರಿಗೆ ಇನ್ನೂ ಹೆಚ್ಚಿನ ಅನುಕೂಲವಾಗುತ್ತದೆ ಎಂದು ಉಪ ವಿಭಾಗಾದಿಕಾರಿ ಹಾಗೂ ಜಿಲ್ಲಾ ನೋಂದಣಿ ಅಧಿಕಾರಿಗಳ ಅಭಿಪ್ರಾಯದೊಂದಿಗೆ ಬೈಲಹೊಂಗಲ ತಾಲ್ಲೂಕಿಗೆ ನೋಟರಿ ಹುದ್ದೆ ಸೃಜಿಸಲು ವರದಿ ಸಲ್ಲಿಸಿರುತ್ತಾರೆ.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಇವರ ಮೇಲೆ (4) ರಲ್ಲಿ ಓದಲಾದ ದಿನಾಂಕ 7/12–4–2010ರ ಪತ್ರದಲ್ಲಿ ಬೈಲಹೊಂಗಲ ತಾಲ್ಲೂಕಿಗೆ ಕೇಂದ್ರ ಸರ್ಕಾರದಿಂದ ನೇಮಕಗೊಂಡ 2 ನೋಟರಿಗಳು ಸೇರಿದಂತೆ ಒಟ್ಟು 5 ಜನ ನೋಟರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ ಚನ್ನಮ್ಮನ ಕಿತ್ತೂರಿನಲ್ಲಿ ದಿನಾಂಕ 09–01–10ರಿಂದ ಜ್ಯೂನಿಯರ್ ಸಿವಿಲ್ ಜಡ್ಜ್ ಸಂಚಾರಿ ನ್ಯಾಯಾಲಯ ಆರಂಭವಾಗಿರುವುದರಿಂದ ಬೈಲಹೊಂಗಲ ಕಂದಾಯ ತಾಲ್ಲೂಕಿಗೆ ಇನ್ನೊಂದು ನೋಟರಿಯ ಅವಶ್ಯಕತೆಯಿದೆ ಎಂದು ಸೀನಿಯರ್ ಸಿವಿಲ್ ಜಡ್ಜ್ ಬೈಲಹೊಂಗಲ ಇವರ ಅಭಿಪ್ರಾಯದೊಂದಿಗೆ ಬೈಲಹೊಂಗಲ ಕಂದಾಯ ತಾಲ್ಲೂಕಿಗೆ ಇನ್ನೊಂದು ನೋಟರಿ ಅವಶ್ಯಕತೆ ಇದೆ ಎಂದು ವರದಿ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಅದರಂತೆ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಸಂ.ಲಾ 114 ಎಲ್‌ಸಿಎಲ್ 09, ಬೆಂಗಳೂರು, ದಿನಾಂಕ: 29ನೇ ಮೇ, 2010**

ಬೆಳಗಾಂ ಜಿಲ್ಲೆ ಬೈಲಹೊಂಗಲ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಎನ್. ಕೃಷ್ಣಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 1445

**COMMERCE AND INDUSTRIES SECRETARIAT**

**Sub :** Approval to the Project Proposal of M/s. Karanji Valley Heights Tourism and Township Pvt. Ltd., to establish an "Integrated Tourism and Residential Life Style Township/Community Project", at Andur Village Bidar Taluk and Halhalli, Village Bhalki Taluk, Bidar District.

**Ref :** Proceedings of the 22nd State High Level Clearance Committee (SHLCC) Meeting held on 24-5-2010.

**Preamble :**

M/s. Karanji Valley Heights Tourism and Township Pvt. Ltd., proposes to establish an " Integrated Tourism and Residential Life Style Township/Community Project", at Andur Village Bidar Taluk and Halhalli Village Bhalki Taluk, Bidar District, with an investment of Rs. 469 crores, generating employment to about 8957 persons.

In the 22nd State High Level Clearance Committee (SHLCC) Meeting held on 24-5-2010, the proposal of the Company has been approved.

Government has examined the recommendations made by the State High Level Clearance Committee in the 22nd Meeting held on 24-5-2010, in all aspects.

Hence the following Order.

**GOVERNMENT ORDER NO. : CI 203 SPI 2010, BANGALORE, DATED : 2-6-2010**

Government is pleased to accord in principle approval to the Project Proposal of M/s. Karanji Valley Heights Tourism and Township Pvt. Ltd., to establish an " Integrated Tourism and Residential Life Style Township/Community Project", at Andur Village Bidar Taluk and Halhalli, Village Bhalki Taluk, Bidar District, with an investment of Rs. 469 crores, generating employment to about 8957 persons and extend the following infrastructure facilities, incentives and concessions.

**INFRASTRUCTURE FACILITIES :**

1. Land : 250 acres-at different Sy. No.s in Andur Village Bidar Taluk and Halhalli Village Bhalki Taluk, Bidar District U/s 109 of KLR Act and conversion of the same to industrial use.
2. Water : 18.5 Million LPD (our of which 5 MLD from already existing pipe line to Bidar from Karanji River, 5 MLD from Ground Water, 2 MLD Recycled Water and o.5 MLD from Rain Water Harvesting).
3. Power : 10,000 KVA power to be serviced by GESCOM.
4. Incentives and Concessions : As per applicable Tourism Policy of the State.

**GENERAL TERMS AND CONDITIONS :**

1. MOU : The project proponents will have to sign a MOU with the Government of Karnataka during the Global Investors Meet in June 2010.
2. Environment : The promoters to obtain CFE and CFO from KSPCB and environmental clearance from MOEF, GOI.
3. Employment : The company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. Vendor Development : Whereever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. Social Infrastructure Development : The company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. Others :

